ಕನ್ನಡಕವಿಕಾವ್ಯಮಾಲೆ

# ಪ್ರೇಮಾರಾಧನ

(ಕನ್ನಡ ಅಮರುಶತಕ)

ಎಸ್. ವಿ. ಪರಮೇಶ್ವರಭಟ್ಟ, ಎಂ. ಎ.

ಶಾರದಾ ಮಂದಿರ
ರಾಮಯ್ಯರ್ ರಸ್ತೆ, ಮೈಸೂರು-೪

ಈ ನಾಲೆಯ ಸಂಪಾದಕರು ಮತ್ತು ಪ್ರಕಾಶಕರು

H. M. SHANKAR NARAYAN RAO, M.A.
*Professor and Head of the Department of Kannada*
*Sarada Vilas College, Mysore*

ಮೊದಲನೆಯ ಮುದ್ರಣ : ೧೯೫೩
ಎರಡನೆಯ ಮುದ್ರಣ : ೧೯೬೦
(ಫೆಬ್ರುವರಿ)



ಬೆಲೆ :
ಸಾಧಾರಣ ಪ್ರತಿ : ೩.೦೦
ಉತ್ತಮ ಪ್ರತಿ : ೬.೦೦



ಮುದ್ರಕರು
ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್
ಮೈಸೂರು

ಪ್ರಿಯಮಿತ್ರ

ಎಚ್. ಎಂ. ಶಂಕರನಾರಾಯಣರಾಯನಿಗೆ

ನನ್ನ ಕನ್ನಡ ಕೃತಿಯ ಕುರಿತೋದಿ ನೀ ಮೆಚ್ಚುನುಡಿ ನುಡಿದೆ ಮೊದಲು
ಕಟ್ಟಿರಕದೊಂದೊಲುಮೆ ನುಡಿ ಸಾಕು ಬೇರಾವುದಿಹುದದಕೆ ಮಿಗಿಲು!
ಸ್ನೇಹವಾತ್ಸಲ್ಯಮಯ ಹೃದಯಾಂತರಾಳದಿಂದರ್ಪಿಸುವೆ ತಂದು
ಮಧುಮಧುರ ರಸಕೃತಿಯ ತಗುವ ಒಂದುಡುಗೊರೆಯ ಕೆಳೆಯ ನಿನಗಿಂದು.

# ಮುನ್ನುಡಿ

ಸಂಸ್ಕೃತ ಸಾಹಿತ್ಯದಲ್ಲಿ ಅಮರು ಕವಿಗೆ ಹಿರಿದಾದ ಸ್ಥಾನವುಂಟು. ನೂರು ಪ್ರೇಮಗೀತೆಗಳನ್ನೊಳಗೊಂಡ ಅಮರು ಶತಕವನ್ನು ಸಹೃದಯರು ಮೆಚ್ಚಿಕೊಂಡು ಮುಕ್ತಕಂಠದಿಂದ ಹೊಗಳಿದ್ದಾರೆ. ಅಮರು ಕವಿಯ ಒಂದು ಶ್ಲೋಕ, ನೂರು ಪ್ರಬಂಧಗಳಿಗೆ ಸಮನೆಂದು ಸಾರುವ ಸೂಕ್ತಿಯೊಂದು ಸಂಸ್ಕೃತ ಸಾಹಿತ್ಯದಲ್ಲಿ ಈ ಕೃತಿಗಿರುವ ಹಿರಿಮೆಯೇನೆಂಬುದನ್ನು ವ್ಯಕ್ತಪಡಿಸುತ್ತದೆ. ಈ ಮುಕ್ತಕಗಳನ್ನು ಪ್ರಸಿದ್ಧ ಆಲಂಕಾರಿಕರು ತಮ್ಮ ಗ್ರಂಥಗಳಲ್ಲಿ ಉದಹರಿಸಿ ಕವಿಯನ್ನು ಗೌರವಿಸಿದ್ದಾರೆ. ಸುಭಾಷಿತಕಾರರಿಗಂತೂ ಅಮರು ಕಾಮಧೇನು. ಅಮರು ಕವಿಯ ಈ ಹಿರಿಮೆಗೆ ಕಾರಣವಾದರೂ ಏನು? ವಿಶ್ವಮೋಹಕವಾದ ಶೃಂಗಾರರಸದ ಪ್ರತಿಪಾದನೆ, ಆ ರಸಕ್ಕೆ ಸಂಬಂಧಿಸಿದ ನಾನಾ ಭಾವಗಳ ಸೂಕ್ಷ್ಮವಾದ ಪ್ರದರ್ಶನ, ವೈದರ್ಭೀರೀತಿಯಲ್ಲಿ ಈ ಮುಕ್ತಕಗಳನ್ನು ಹೆಣೆದಿರುವುದು, ವಿಷಯ ನಿರೂಪಣೆಗೆ ಯೋಗ್ಯವಾದ ಬಗೆ ಬಗೆಯ ವೃತ್ತಗಳ ಆಯ್ಕೆ ಇವೇ ಮೊದಲಾದುವು ಈ ಶತಕದ ಪ್ರಶಸ್ತಿಗೆ ಕಾರಣಗಳು. ಈ ಮುಕ್ತಕಗಳಿಗೆ ಮರುಳಾಗಿ ಸಮಗ್ರಶತಕವನ್ನೇ ಕನ್ನಡ ನುಡಿಯಲ್ಲಿ ಕನ್ನಡಿಸುವ ಪ್ರಯತ್ನಗಳು ಬಹು ಹಿಂದಿನಿಂದಲೂ ನಡೆದು ಬಂದಿವೆ; ಈಗಲೂ ನಡೆಯುತ್ತಿವೆ. ಈ ತೆರನಾದ ಪ್ರಯತ್ನಗಳಲ್ಲಿ ನನ್ನ ಪ್ರಿಯಮಿತ್ರರಾದ ಶ್ರೀ ಎಸ್. ವಿ. ಪರಮೇಶ್ವರಭಟ್ಟರ ಈ ಅನುವಾದವೂ ಒಂದು.

ಮೂಲಕೃತಿಯ ಸೊಬಗನ್ನೆಲ್ಲ ಅನುವಾದದಲ್ಲಿ ತರುವುದು ತುಂಬ ಕಷ್ಟ. ಒಂದೇ ಭಾಷೆಗೆ ಮೀಸಲಾದ ಶಬ್ದಸಂಪತ್ತು, ನಾದಮಾಧುರ್ಯಗಳೂ ಉಂಟು. ಇವುಗಳನ್ನು ಬೇರೆ ನುಡಿಯಲ್ಲಿ ತರುವುದು ಸಾಧ್ಯವಾಗಲಾರದ ಕಾರಣ ಅನುವಾದ ಕಾರ್ಯ ನಿರುಪಯೋಗವೆಂದು ಹೇಳಲಾಗದು. ಅನುಭವ ಸಂಸ್ಕಾರಗಳಿಗೆ ತಕ್ಕಂತೆ ಅನುವಾದಗಳ ಬೆಲೆಯಲ್ಲಿಯೂ ವ್ಯತ್ಯಾಸ ಕಂಡು ಬರುತ್ತದೆ. ಒಂದೊಂದು ತಲೆಮಾರಿನವರೂ ಉತ್ತಮ ಕೃತಿಗಳನ್ನು ತಮ್ಮ ಅಭಿರುಚಿಗೆ ತಕ್ಕಂತೆ ಕನ್ನಡಿಸಿಕೊಳ್ಳುತ್ತಾರೆ. ಈ ಪ್ರಯತ್ನ ಆ ತೆರನಾದು

ದೆಂದು ತಿಳಿದು ಸಹೃದಯರು ಈ ನನ್ನ ಗೆಳೆಯರ ಕೃತಿಯನ್ನು ಆದರದಿಂದ ಬರಮಾಡಿಕೊಳ್ಳುವರೆಂದು ನಾನು ಆಶಿಸುತ್ತೇನೆ.

ಈ ಕೃತಿಯ ಪೋಷಣೆ ಸಹೃದಯರಿಗಿರಲಿ.

ತಮ್ಮ ಕೃತಿಯನ್ನು ಈ ನನ್ನ ಮಾಲೆಯಲ್ಲಿ ಪ್ರಕಟಿಸಲು ಒಪ್ಪಿದ ನನ್ನ ಮಿತ್ರರಿಗೆ ನಾನು ತುಂಬ ಋಣಿ. ಅಂತೆಯೇ ಈ ಕೃತಿಯನ್ನು ಚೆಲುವಾಗಿ ಅಚ್ಚಿಟ್ಟುಕೊಟ್ಟ ಪ್ರಿಯಮಿತ್ರ ಶ್ರೀ ಜಿ. ಎಚ್. ರಾಮರಾಯರಿಗೂ ನಾನು ತುಂಬ ಕೃತಜ್ಞ.

ಶಾರದಾಮಂದಿರ
೫೭೮ ಕೃಷ್ಣರಾಜವನಂ
ಮೈಸೂರು
ವಿನಾಯಕ ಚತುರ್ಥೀ
೧೨-೯-೧೯೫೩

ಎಚ್. ಎಂ. ಶಂಕರನಾರಾಯಣರಾವ್
ಸಂಪಾದಕ

## ಎರಡನೆಯ ಮುದ್ರಣ

ಇದು ಮೊದಲ ಮುದ್ರಣದ ಪುನರ್ ಮುದ್ರಣ. ಇದರಲ್ಲಿ ಯಾವ ಬದಲಾವಣೆಯನ್ನೂ ಮಾಡಿಲ್ಲ. ಹದಿನೇಳು ವರ್ಷಗಳ ನಂತರ ಈ ಕೃತಿ ಮತ್ತೆ ಬೆಳಕು ಕಾಣುತ್ತಿದೆ. ಪ್ರತಿಗಳು ಮುಗಿದು ಈ ಗ್ರಂಥಕ್ಕೆ ಬೇಡಿಕೆಗಳು ಬರುತ್ತಲೇ ಇದ್ದು, ವಾಚಕರ ಬಯಕೆಯನ್ನು ಪೂರೈಸಲು ಈಗಲಾದರೂ ಸಾಧ್ಯವಾಯಿತಲ್ಲ ಎಂದು ಮನಸ್ಸಿಗೆ ಸಮಾಧಾನ ತಂದುಕೊಳ್ಳುತ್ತಿದ್ದೇನೆ.

ಮೊದಲ ಮುದ್ರಣವನ್ನು ಅಚ್ಚುಮಾಡಿದ ಮೈಸೂರು ಪ್ರೆಸ್ಸಿನವರೇ ಇದನ್ನು ಈಗಲೂ ಸುಂದರವಾಗಿ ಮುದ್ರಿಸಿಕೊಟ್ಟಿದ್ದಾರೆ. ಅವರಿಗೂ ಇದರಲ್ಲಿ ಶ್ರದ್ಧೆ ವಹಿಸಿದ ಶ್ರೀ ಜಿ. ಎಚ್. ಕೃಷ್ಣಮೂರ್ತಿಗಳಿಗೂ ನನ್ನ ವಂದನೆಗಳು ಸಲ್ಲುತ್ತವೆ.

ಶಾರದಾಮಂದಿರ
ರಾಮಯ್ಯರ್‌ರಸ್ತೆ, ಮೈಸೂರು-೪
೨೬ ಜನವರಿ ೧೯೭೦

ಎಚ್. ಎಂ. ಶಂಕರನಾರಾಯಣರಾವ್
ಸಂಪಾದಕ

# ಪ್ರಸ್ತಾವನೆ

೧

ಈ ಪುಸ್ತಕದ ಮುಂದಿನ ಪುಟಗಳಲ್ಲಿ ಪ್ರಕಟವಾಗಿರುವ 'ಅಮರುಶತಕ'ದ ಪದ್ಯಗಳ ಸ್ವಾರಸ್ಯವನ್ನು ಕುರಿತು ಇಲ್ಲಿ ನಾಲ್ಕಾರು ಮಾತುಗಳನ್ನು ಬರೆಯಲು ಉದ್ದೇಶಿಸಿದ್ದೇನೆ.

"ಅಮರುಕ ಕವಿಯ ಒಂದು ಶ್ಲೋಕ ನೂರು ಪ್ರಬಂಧಕ್ಕೆ ಸಮ" ಎಂಬ ಅರ್ಥದ ಒಂದು ಪ್ರಶಂಸೆಯ ಮಾತು ಸಂಸ್ಕೃತದಲ್ಲಿದೆ. ಈ ಕವಿಯ ಯಾವ ಒಂದು ಶ್ಲೋಕವನ್ನು ಓದಿದರೂ ಸಾಕು, ಈ ಪ್ರಶಂಸೆಯ ಮಾತು ಕಡಿಮೆಯಾಯಿತೇ ಹೊರತು ಹೆಚ್ಚಾಗಲಿಲ್ಲ ಎನ್ನುವ ಅಭಿಪ್ರಾಯಕ್ಕೇ ನಾವು ಬರುತ್ತೇವೆ. ಅಂತಹ ಒಂದು ಅಪೂರ್ವವಾದ ಕಾವ್ಯಸ್ವಾರಸ್ಯ ಈ ಪದ್ಯಗಳಲ್ಲಿ ಇದೆ, ಅಂತಹ ಒಂದು ಲೋಕೋತ್ತರವಾದ ಅನುಭವ ವಿಶೇಷ ಈ ಕೃತಿಯಲ್ಲಿ ಅಡಗಿದೆ; ಅಷ್ಟೇಕೆ ಶುದ್ಧವಾದ ಭಾವಗೀತೆಯಲ್ಲಿ ಕಾಣ ಬರುವ ಗುಣವಿಶೇಷಗಳೆಲ್ಲ ಈ ಅಮರು ಕವಿಯ ಪದ್ಯಗಳಲ್ಲಿ ಅಭಿವ್ಯಕ್ತಿ ಯನ್ನು ಕಂಡುಕೊಂಡಿವೆ. "ಅರ್ಥಮುಕ್ತ, ಭಾವದೀಪ್ತ, ಧ್ವನಿಪ್ರಚುರ" ಎಂದು ಕವಿ ಕುವೆಂಪು ಬೇರೊಂದು ಸಂದರ್ಭದಲ್ಲಿ ಹೇಳಿರುವ ಮಾತು ಈ ಕವಿಯ ಈ ಒಂದೊಂದು ಪದ್ಯಕ್ಕೂ ಬಹಳ ಚೆನ್ನಾಗಿ ಒಪ್ಪುತ್ತದೆ.

೨

ಅಮರುಕ ಕವಿಯ ಈ ಶತಕ ಒಂದು ಚಿತ್ರಶಾಲೆ. ಈ ಚಿತ್ರಶಾಲೆಯಲ್ಲಿ ಕವಿ ಬಗೆ ಬಗೆಯ ಚಿತ್ರವನ್ನು ಪ್ರದರ್ಶಿಸಿದ್ದಾನೆ. ಒಂದೊಂದು ಪದ್ಯವೂ ಒಂದೊಂದು ಶಬ್ದ ಚಿತ್ರವಾಗಿ ಪರಿಣಮಿಸಿದೆ. ನಾಯಕನ ಅಥವಾ ನಾಯಿಕೆಯ ಯಾವುದೋ ಒಂದು ಚಿತ್ತವೃತ್ತಿಯ ಚಿತ್ರವನ್ನು ನೆನೆದು ಕವಿ ಒಂದು ಪದ್ಯ ವನ್ನು ಬರೆದರೆ, ಇನ್ನೊಂದರಲ್ಲಿ ಇನ್ನೊಂದು ಬಗೆಯ ಮನೋಧರ್ಮದ ಚಿತ್ರ ವನ್ನು ಬರೆದಿದ್ದಾನೆ. ಮುಂದಿನ ಪುಟಗಳಲ್ಲಿ ಇರುವ ಪದ್ಯಗಳ ಶೀರ್ಷಿಕೆ ಗಳನ್ನು ಓದಿದರೆಯೇ ಸಾಕು, ಕವಿ ಎಷ್ಟೊಂದು ಬಗೆಯ ಪ್ರಣಯಿ ಜನರ

ಮನೋವ್ಯಾಪಾರಗಳನ್ನು ಚಿತ್ರಿಸಿದ್ದಾನೆ ಎನ್ನುವುದರ ಅರಿವಾಗುತ್ತದೆ. ಸ್ವಲ್ಪ ವಿವರವಾಗಿ ಈ ವಿಷಯವನ್ನು ಇಲ್ಲಿ ಪರ್ಯಾಲೋಚಿಸಲಾಗಿದೆ. ಹಾಗೆಯೇ ಪುಟಗಳನ್ನು ತಿರುವಿ! ಅದೋ! ಅಲ್ಲಿ ನಾಯಕನಿಂದ ಭೇದೋಪಾಯಕ್ಕಾಗಿ ನಿಯೋಜಿತಳಾದ ಸಖಿಯೊಬ್ಬಳು ತನ್ನ ನಾಯಿಕೆಯನ್ನು ಕುರಿತು ಏನನ್ನೋ ಉಸುರುತ್ತಿದ್ದಾಳೆ; ಇದು ಒಂದು ಚಿತ್ರ. ಇದೋ! ಅಪರಾಧಿ ನಾಯಕನನ್ನು ನಾಯಿಕೆ ನಿರ್ಭರ್ತ್ಸನ ಗೈಯ್ಯುತ್ತಿದ್ದಾಳೆ, ಇಲ್ಲಿ; ಇದು ಇನ್ನೊಂದು ಚಿತ್ರ. ಮತ್ತೊಂದು ಕಡೆಯಲ್ಲಿ ಇನ್ನೊಬ್ಬಳು ಸಖಿ ನಾಯಿಕೆಯ ಸನ್ನಿಧಿಯಲ್ಲಿ ನಾಯಕನನ್ನು ಕುರಿತು ಹೇಳುತ್ತಿರುವಂತೆ ಚಿತ್ರಿತವಾಗಿರುವ ಒಂದು ಚಿತ್ರ ಇದೆ. ಮಗುದೊಂದು ಎಡೆಯಲ್ಲಿ 'ಮಾನವನ್ನು ಧಾರಣಮಾಡು' ಎಂದು ಸಖಿಯರಿಂದ ಉಪದೇಶ ಪಡೆದ ನಾಯಿಕೆ ತನಗೆ ಹೇಗೆ ಅದು ಅಸಾಧ್ಯವಾಯಿತೆಂಬುದನ್ನು ಸಖಿಯರಿಗೆ ಹೇಳುತ್ತಿರುವ ಒಂದು ಚಿತ್ರ ಇದೆ. ನಾಯಕನು ನಾಯಿಕೆಯನ್ನೋ ನಾಯಿಕೆ ನಾಯಕನನ್ನೋ ನಿಂದಿಸುವಂತಹ ಚಿತ್ರ ಹತ್ತಾರು. ಎತ್ತ ಕಣ್ಣು ತಿರುಗಿಸಿದರೆ ಅತ್ತ ಕಲಹಾಂತರಿತೆಯಾದ ನಾಯಿಕೆಯ ಚಿತ್ರ ನಮ್ಮ ಕಣ್ಣಿಗೆ ಬೀಳುತ್ತದೆ. ಒಂದು ಕಡೆ ಸ್ವಾಪರಾಧವನ್ನು ಮರೆಮಾಚುತ್ತಿರುವ ನಾಯಕನನ್ನು ನಿಂದಿಸುತ್ತಿರುವ ನಾಯಿಕೆ ಕಾಣಬಂದರೆ, ಇನ್ನೊಂದು ಕಡೆ ಸ್ವಾಪರಾಧದಿಂದ ಕುಪಿತೆಯಾದ ನಾಯಿಕೆಯನ್ನು ಪುನಃ ವಿದಗ್ಧತೆಯಿಂದ ಪ್ರಮೋಹಪರಳನ್ನಾಗಿ ಮಾಡಿದ ನಾಯಕ ಕಾಣಬರುತ್ತಾನೆ. ಸಖೀಜನರ ಉಪದೇಶದಿಂದ ಮಾನ ಧಾರಣಮಾಡಿ ಪ್ರಿಯನನ್ನು ತೊಲಗಿಸಿ ಪಶ್ಚಾತ್ತಾಪಪಡುತ್ತಿರುವ ನಾಯಿಕೆಯ ದೈನ್ಯಾವಸ್ಥೆ ಒಂದು ಚಿತ್ರದ ವಸ್ತುವಾದರೆ, ಸಖಿಯರಿಂದ ಮಾನಧಾರಣೋಪದೇಶವನ್ನು ಸ್ವೀಕರಿಸಿದ ನಾಯಿಕೆ ವಚನೋಲ್ಲಂಘನ ಭಯದಿಂದ ಕಪಟ ಮಾನವನ್ನು ತಳೆದಂಥ ಅವಸ್ಥೆ ಇನ್ನೊಂದು ಚಿತ್ರದ ವಸ್ತುವಾಗಿದೆ. ಸಂಭೋಗ ತರಳನಾದ ನಾಯಕನ ಚೇಷ್ಟೆ ಒಂದು ಚಿತ್ರದಲ್ಲಿ ಕಂಡರೆ ನವ ಸಂಗಮದಲ್ಲಿ ಲಜ್ಜೆಯಿಂದ ವ್ಯಾಕುಲಗೊಂಡ ನಾಯಿಕೆಯ ಸಂಕೋಚ ಇನ್ನೊಂದು ಚಿತ್ರದಲ್ಲಿ ಕಾಣಬರುತ್ತದೆ. ಹೀಗೆಯೇ ಕುಪಿತೆಯಾದ ನಾಯಿಕೆಯನ್ನು ಸಾಂತ್ವನಗೊಳಿಸುವ ನಾಯಕನ ಅಪರಾಧಾತಿಶಯದಿಂದ ಇನ್ನೂ ಕುಪಿತೆಯಾದ ನಾಯಿಕೆಯ ಸ್ಥಿತಿ, ಪ್ರೇಮಾತಿಶಯದಿಂದ

ನಾಯಿಕೆ ನಾಯಕನಲ್ಲಿ ಎಸಗಿದ ಸ್ವಕೀಯ ಚಾಪಲ್ಯ, ಧೂರ್ತನಾದ ನಾಯಕ ನಾಯಿಕೆಯಲ್ಲಿ ಎಸಗಿದ ಕೈತವ, ಸ್ವಾಭಿಲಾಷೆಯನ್ನು ಪ್ರಿಯನಲ್ಲಿ ನಿವೇದನಮಾಡಲು ಅಸಮರ್ಥಳಾದ ವಿಷಣ್ಣಾ ನಾಯಿಕೆಯ ಕತೆ, ಮೊದಲು ಮುಗ್ಧತೆಯಿಂದ ವಂಚಿತೆಯಾದೆನೆಂದು ಪಶ್ಚಾತ್ತಾಪಪಡುತ್ತಿರುವ ನಾಯಿಕೆಯ ಆ ಮುಂದಣ ಆತ್ಮೋಪಾಲಂಭನೆ, ಪ್ರೇಮ ತಗ್ಗಿದ ನಾಯಕನನ್ನು ಕುರಿತು ನಿಂದಿಸುತ್ತಿರುವ ನಾಯಿಕೆಯ ಆ ಹೊತ್ತಿನ ನಿರ್ವೇದ, ಅನುಭೂತಾರ್ಥಸ್ಮರಣೆಯಾದ ಕುತೂಹಲದಿಂದ ನಾಯಕನು ಸಹಚರ ನೊಡನೆ ಆಡುವಂದು ತೆಗೆಯುವ ಆನಂದದ ಉದ್ಗಾರ, ಹೀಗೆ ಬಗೆ ಬಗೆಯ ಚಿತ್ತವೃತ್ತಿಯ ನಾಯಕ ನಾಯಿಕೆಯರ ಚಿತ್ರಗಳು ಇಲ್ಲಿ ಮೂಡಿಬಂದಿವೆ.

ಮೇಲೆ ಹೇಳಿದ ಚಿತ್ರಗಳಲ್ಲಿ ಬಹು ಪಾಲು ಚಿತ್ರಗಳು 'ಮನ್ಯು ಕಥನ'ಕ್ಕೆ ಸಂಬಂಧಪಟ್ಟವು. 'ಪ್ರವಾಸ ಕಥನ'ಕ್ಕೆ ಸಂಬಂಧಪಟ್ಟ ಚಿತ್ರಗಳಂತೂ ಅತೀವ ಸುಂದರವಾಗಿ ಅನ್ಯಾದೃಶವಾಗಿ ಕಾಣಿಸುತ್ತವೆ. ಭವಿಷ್ಯತ್ ಪ್ರವಾಸ ವಿಪ್ರಲಂಭ ಶೃಂಗಾರವನ್ನು ಪ್ರತಿಪಾದಿಸುವ ಈ ಚಿತ್ರಗಳು ಎಷ್ಟು ಮೋಹಕ ! ಎಷ್ಟು ಚಿತ್ತಾಕರ್ಷಕ !! ಒಂದು ಚಿತ್ರದಲ್ಲಿ ಪ್ರವಾಸ ಹೊರಟ ನಾಯಕನು ವಸಂತಸಮಾಗಮದಲ್ಲಿ ಪ್ರಿಯೆಯ ಅವಸ್ಥಾಂತರವನ್ನು ವಿತರ್ಕಿಸುತ್ತಾನೆ. ಇನ್ನೊಂದು ಚಿತ್ರದಲ್ಲಿ ಪಥಿಕವನಿತೆ ಪ್ರಿಯನು ಬರುವ ದಾರಿಯನ್ನೇ ನೋಡುತ್ತ ಅವನ ಬರವನ್ನೇ ಕಾಯುತ್ತ ಮಾರ್ಗಾವಲಗ್ನನೇತ್ರೆಯಾಗಿದ್ದಾಳೆ. ಇನ್ನೊಂದರಲ್ಲಿ ನೂರು ದಿನಗಳು ಹಿಡಿಯುವ ದೂರದ ದೇಶಕ್ಕೆ ಪ್ರಯಾಣ ಹೊರಟು ನಿಂತ ನಲ್ಲನನ್ನು ನಲ್ಲೆ ತನ್ನ ಮುಗ್ಧಾಲಾಪದಿಂದ ತಡೆಯುತ್ತಿದ್ದಾಳೆ. ಮೋಡದ ಮೊಳಗು ಕೇಳಿಯೋ ರಾತ್ರಿಯೆಲ್ಲ ಅಳುತ್ತ ಪ್ರಿಯತಮೆಯನ್ನು ನೆನೆದು ನೆನೆದು ಹಾಡುತ್ತಿರುವ ಪಥಿಕವಿರಹಿಯ ಚಿತ್ರ ಇನ್ನೊಂದು ಕಡೆ. ಪ್ರವಾಸ ಹೋದ ನಾಯಕನ ಹಿಂದೆಯೇ 'ಎಲೈ ಜೀವಿತವೇ ! ನೀನೇಕೆ ಹೋಗದೆ ಉಳಿದೆ' ಎಂದು ಕೊರಗುವ ವಿರಹಿಣಿಯ ಚಿತ್ರ ಮತ್ತೊಂದು ಕಡೆ.

ಮನ್ಯುಕಥನ, ಪ್ರವಾಸ ಕಥನಗಳಂತೆ 'ಭೋಗಕಥನ' ಗಳ ಚಿತ್ರವೂ ಇಲ್ಲಿ ಇವೆ. ನಾಯಕನಿಂದ ಪ್ರಲೋಭಿತೆಯಾದ ನಾಯಿಕೆ, ನಾಯಕ ಸಮಾಗಮೋತ್ಸುಕೆಯಾದ ಸ್ವಾಧೀನಪತಿಕೆ, ಪ್ರಥಮ ನರ್ಮಾರಂಭದಲ್ಲಿ ಕಾಣಬರುವ

ಲಜ್ಜಿತೆಯಾದ ನವವಧು, ನರ್ಮವಿದಗ್ಧನಾದ ನಾಯಕ, ಈ ಮೊದಲಾದ ಹತ್ತಾರು ಸುಂದರವಾದ ಚಿತ್ರಗಳು ಈ ಭಾಗದಲ್ಲಿ ಇವೆ.

೩

ಈರ್ಷ್ಯಾ ಮಾನಕೃತ ವಿಪ್ರಲಂಭ ಶೃಂಗಾರವನ್ನೂ ಪ್ರಣಯಮಾನಕೃತ ವಿಪ್ರಲಂಭ ಶೃಂಗಾರವನ್ನೂ ಪ್ರತಿಪಾದಿಸುವಂತಹ ಪದ್ಯಗಳು 'ಮನ್ಯುಕಥನ'ದಲ್ಲಿ ದೊರೆಯುತ್ತವೆ. ಭವಿಷ್ಯತ್ ಪ್ರವಾಸ ವಿಪ್ರಲಂಭ ಶೃಂಗಾರವನ್ನು ಪ್ರತಿಪಾದಿಸುವ ಪದ್ಯಗಳು 'ಪ್ರವಾಸಕಥನ'ದಲ್ಲಿ ಕಾಣಬರುತ್ತವೆ. ಹಾಗೆಯೇ 'ಭೋಗಕಥನ'ದಲ್ಲಿ 'ಮಾನಾನಂತರ ಸಂಭೋಗ'ವನ್ನು ಪ್ರತಿಪಾದಿಸುವ ಹಲವು ಪದ್ಯಗಳೂ 'ಪ್ರವಾಸಾನಂತರ ಸಂಭೋಗ'ವನ್ನು ಚಿತ್ರಿಸುವ ಕೆಲವು ಪದ್ಯಗಳೂ ಇವೆ. ಈ ಪದ್ಯಗಳಲ್ಲಿ ನಿರ್ವೇದ, ಹರ್ಷ, ದೈನ್ಯ, ಅವಹಿತ್ಥ, ಔತ್ಸುಕ್ಯ, ಶಂಕೆ, ವ್ರೀಡೆ, ಪ್ರಳಯ, ವಿಷಾದ, ಸಂಜ್ವರ, ಭಯ, ಚಕಿತ, ಸ್ಮೃತಿ ಮುಂತಾದ ಸಂಚಾರಿ ಭಾವಗಳನ್ನು ಕವಿ ಚಿತ್ರಿಸಿದ್ದಾನೆ.

೪

ಈ ಶತಕದ ಪದ್ಯಗಳಲ್ಲಿ ಸಖಿ ನಾಯಿಕೆಯನ್ನೋ ನಾಯಕನನ್ನೋ ಕುರಿತು ಹೇಳುವ ಕೆಲವು ಪದ್ಯಗಳಿವೆ. ಇವುಗಳನ್ನು ಸಖೀವಾಕ್ಯ ಎಂದು ಕರೆಯಬಹುದು. ಇನ್ನು ಕೆಲವು ಪದ್ಯಗಳು ನಾಯಿಕೆ ನಾಯಕನನ್ನೋ ಸಖಿಯರನ್ನೋ ಕುರಿತು ಹೇಳುವಂತೆ ಇವೆ. ಈ ಪದ್ಯಗಳನ್ನು ನಾಯಿಕಾ ವಾಕ್ಯ ಎಂದು ಕರೆಯಬಹುದು. ಇನ್ನು ಕೆಲವು ಪದ್ಯಗಳು ನಾಯಕನು ನಾಯಿಕೆಯನ್ನೋ ಸಹಚರನನ್ನೋ ಸಂಬೋಧಿಸಿ ಹೇಳತಕ್ಕ ರೀತಿಯಲ್ಲಿವೆ. ಇಂತಹವುಗಳನ್ನು 'ನಾಯಕೋಕ್ತಿ' ಎನ್ನಬಹುದು. ಉಳಿದ ಕೆಲವು ಕವಿಯೇ ವರ್ಣಿಸಿ ಹೇಳಿದಂತೆ ಬರೆದವುಗಳಾಗಿವೆ. ಇವುಗಳನ್ನು 'ಕವಿವಾಕ್ಯ' ಎನ್ನಬಹುದು. ಕ್ವಚಿತ್ತಾಗಿ ಅಲ್ಲೊಂದು ಇಲ್ಲೊಂದು ಪದ್ಯ ತುಂಬ ನಾಟಕೀಯವಾಗಿ ನಾಯಕ-ನಾಯಿಕೆ ಅಥವಾ ನಾಯಿಕೆ-ಸಖಿ ಇವರ ಉಕ್ತಿ ಪ್ರತ್ಯುಕ್ತಿ ಪರೂಪವಾದ ಪ್ರಶ್ನೋತ್ತರ ಮಾಲೆಯಾಗಿ ಕಾಣಿಸುತ್ತದೆ. ಇಂತಹವುಗಳನ್ನು ನಾಯಕ ನಾಯಿಕಾ ಸಂವಾದ ಅಥವಾ ಸಖೀನಾಯಿಕಾ ಸಂವಾದ ಎಂದು

ಕರೆಯಬಹುದು. ಹೀಗೆ ಕವಿ ಕೆಲಕೆಲವು ಪದ್ಯಗಳನ್ನು ಬೇರೆ ಬೇರೆ ರೀತಿಯಲ್ಲಿ ಇನ್ನೊಬ್ಬರು ಆಡಿದ ಮಾತು ಎಂಬಂತೆ ಬರೆದಿರುವುದರಲ್ಲಿ ತುಂಬ ಸ್ವಾರಸ್ಯ ಐದೆ. ಸಂವಾದ, ನಾಟಕೀಯತೆ ಇವುಗಳ ಚೆಲುವು ಲಭಿಸಿರುವುದರ ಜೊತೆಗೆ ಮಾತಿಗೆ ಆತ್ಮೀಯತೆಯ ಒಂದು ಸೊಗಸು ಬಂದಿದೆ. ಭಾವಗೀತೆಗಳ ಜೀವ ಜೀವಾಳವನ್ನು, ಈ ಕವಿ ಬಲ್ಲನು ಎನ್ನುವುದಕ್ಕೆ ಈ ನಿರ್ಮಾಣ ಕೌಶಲ ಸಾಕು. ವೈಯಕ್ತಿಕವಾದ ಮನಸ್ಸಿನ ತುಯ್ತ ಇಂತಹ ಗೀತಗಳಲ್ಲಿ ಮನಸ್ಸು ಕಲಕುವಂತಹ ರೀತಿಯಲ್ಲಿ ಹೊರಹೊಮ್ಮುತ್ತದೆ.

೫

ಈ ಪದ್ಯಗಳಲ್ಲಿ ಕಾಣಬರುವ ನಾಯಿಕೆ ನಾಯಕರನ್ನು ಕುರಿತು ಒಂದು ಮಾತು. ಇಲ್ಲಿ ಬರುವ ಎಲ್ಲ ಪದ್ಯಗಳಲ್ಲೂ ಚಿತ್ರಿತವಾಗಿರುವ ನಾಯಿಕೆ ಸ್ವೀಯೆ. ಒಂದೋ ಎರಡೊ ಕಡೆಗಳಲ್ಲಿ ಮಾತ್ರ 'ಪರಕೀಯೆ' ಎಂಬ ಪ್ರಭೇದದ ನಾಯಿಕೆಯ ಚಿತ್ರ ಇದೆ. ಈ ಸ್ವೀಯೆ ಸಾಮಾನ್ಯವಾಗಿ ಮುಗ್ಧೆ ಇಲ್ಲವೆ ಮಧ್ಯಮೆ ಎಂಬಂತೆ ಚಿತ್ರಿತೆಯಾಗಿದ್ದಾಳೆ. ಅಧೀರೆ, ಖಂಡಿತೆ, ಪ್ರಗಲ್ಭೆ, ಕಲಹಾಂತರಿತೆ, ಧೀರೆ, ಪ್ರೌಢೆ, ಸ್ವಾಧೀನಪತಿಕೆ, ಅಭಿಸಾರಿಕೆ, ಕನ್ಯೆ, ಸಾಧಾರಿಣೀ, ವಿರಹೋತ್ಕಂಠಿತೆ, ಪ್ರೋಷಿತ ಭರ್ತೃಕೆ, ವಾಸವ ಸಜ್ಜಿಕೆ ಎಂಬ ಒಳಭೇದದ ವಿವರಗಳನ್ನು ಕೂಡ ಬಲ್ಲವರು ಈ ನಾಯಿಕೆಯರ ಚಿತ್ರಗಳಲ್ಲಿ ಕಾಣಬಹುದಾಗಿದೆ. ಅಮರುಶತಕದ ನಾಯಕನು ಸಾಮಾನ್ಯ ವಾಗಿ 'ಶಠ'ನೋ 'ಅನುಕೂಲ'ನೋ ಆಗಿ ಕಾಣಿಸಿಕೊಳ್ಳುತ್ತಾನೆ.'ಧೃಷ್ಟ'ನೂ 'ದಕ್ಷಿಣ'ನೂ ಆದ ನಾಯಕನ ಚಿತ್ರವೂ ಕೆಲವು ಪದ್ಯಗಳಲ್ಲಿ ಇದೆ. ನಾಯಕ ನಾಯಿಕೆಯರ ಲಕ್ಷಣಗಳನ್ನೂ ಅವರ ಚರ್ಯೆಗಳನ್ನೂ ವಿವರದಲ್ಲಿ ತಿಳಿಯ ಬಯಸುವವರು ಅಲಂಕಾರ ಗ್ರಂಥಗಳನ್ನು ನೋಡಬೇಕಾಗುತ್ತದೆ. ಅಂತಹ ವಿವರಣೆ ಸದ್ಯಕ್ಕೆ ನಮ್ಮ ಕಾರ್ಯವ್ಯಾಪ್ತಿಯ ಒಳಗಡೆಗೆ ಬರುವುದಿಲ್ಲವೆಂದು ಕೇವಲ ಹೆಸರನ್ನು ಸೂಚಿಸಿ ಅಷ್ಟರಲ್ಲಿಯೇ ತೃಪ್ತಿಯನ್ನು ತಾಳಬೇಕಾಗಿದೆ.

೬

ರಸಕವಿಗಳ ರಾಜನೆಂದು ಹೆಸರುಗಳಿಸಿರುವ ಅಮರು ಕವಿಯ ಈ ನಾಯಕ ನಾಯಿಕೆಯರ ಚಿತ್ರಗಳಲ್ಲಿ ಕೆಲವನ್ನು ಆಯ್ದು ಇನ್ನೂ ಸ್ವಲ್ಪ ವಿವರವಾಗಿ

ಇಲ್ಲಿ ವಿವೇಚಿಸುವುದು ಅವಶ್ಯಕ. ‘ಮನ್ಯು ಕಥನ’ದ ಕೆಲವು ಚಿತ್ರಗಳನ್ನು ತೆಗೆದುಕೊಳ್ಳೋಣ. ಇಲ್ಲಿ ಪೂರ್ವಭಾವಿಯಾಗಿ ನಾವು ಗ್ರಹಿಸಬೇಕಾದ ಕೆಲವು ಅಂಶಗಳಿವೆ. ‘ಪ್ರಣಯ ಕೋಪ’ವನ್ನು ತಳೆದ ನಾಯಿಕೆಯರನ್ನು ಚಿತ್ರಿಸುವುದು ಕಾವ್ಯಗಳಲ್ಲಿ ವಿಶೇಷವಾಗಿ ಕಾಣಬರುವ ಒಂದು ಸಂಗತಿ. ತನ್ನ ನಲ್ಲನ ವಿಷಯದಲ್ಲಿ ಕೋಪಗೊಂಡ ನಲ್ಲೆ ನಿಜಕ್ಕೂ ಹೆಚ್ಚಿನ ಒಂದು ಬೆಡಗಿನಿಂದ, ಬಿಂಕದಿಂದ ಕಾಣಿಸುತ್ತಾಳೆ ಎನ್ನುವ ಒಂದು ಮತ ಇದೆ. ಕಾರಣ ಇರಲಿ ಇಲ್ಲದಿರಲಿ ತನ್ನ ಪ್ರಿಯನ ವಿಷಯದಲ್ಲಿ ಮುನಿಸು ತಾಳಬೇಕು, ಇಂತಹ ಮುನಿಸು ತನ್ನ ವಿಲಾಸಕ್ಕೆ ಒಂದು ಹೊಸ ಕಾಂತಿಯನ್ನು ನೀಡುತ್ತದೆ ಎನ್ನುವುದು ಪ್ರಿಯತಮೆಯರ ಅಭಿಪ್ರಾಯವಾಗಿತ್ತು. ಈ ಅಭಿಪ್ರಾಯ ಪ್ರಿಯತಮೆಯರಿಗೆ ಇತ್ತೊ ಇಲ್ಲವೊ ಅವರ ಸಖೀವೃಂದದಿಂದ ಇಂತಹ ಮಾನಧಾರಣ ಪ್ರಣಯ ಧರ್ಮದ ಅವಶ್ಯಕರ್ಮ ಎಂಬ ಉಪದೇಶವಂತೂ ಆಗಾಗ ಅವರಿಗೆ ದೊರೆಯುತ್ತಿತ್ತು. ಅಮರುವಿನ ಮನ್ಯು ಕಥನದ ಚಿತ್ರಗಳನ್ನು ಆಳವಾಗಿ ಅಭ್ಯಾಸಮಾಡಿದವರಿಗೆ ಈ ವಿಷಯ ಖಚಿತವಾಗುತ್ತದೆ. ಎಷ್ಟೋ ವೇಳೆ ಸುತ್ತಲೂ ನೆರೆದ ಸಖಿಯರು ಕೇವಲ ವಿನೋದಕ್ಕಾಗಿ ತಮ್ಮ ನಾಯಿಕೆಯ ಕಿವಿಯಲ್ಲಿ ನಾಯಕನ ವಿಷಯವಾಗಿ ಚಾಡಿ ಛಿದ್ರಗಳನ್ನು ಬೆಸೆದುಬಿಡುತ್ತಾರೆ. ಇದರ ಪರಿಣಾಮ ಗೊತ್ತೇ ಇದೆ. ಸಖಿಯರ ಕಟ್ಟುಕಥೆ ನಂಬಿ ನಾಯಿಕೆ ಮನೆಗೆ ಬಂದ ನಾಯಕನ ಮೇಲೆ ಇಲ್ಲಸಲ್ಲದ ಆರೋಪ ಹೊರಿಸುತ್ತಾಳೆ, ಅವನನ್ನು ನಿಂದಿಸಿ ಅವನ ವಿಷಯದಲ್ಲಿ ಕೋಪಗೊಂಡು ಅವನನ್ನು ತಿರಸ್ಕರಿಸುತ್ತಾಳೆ. ಅವನ ಅನುನಯದ ನುಡಿಗಳಿಗೆ, ಚಾಟೂಕ್ತಿಗಳಿಗೆ ವಿಮುಖಳಾಗುತ್ತಾಳೆ. ಕಣ್ಣು ದೊಡ್ಡದು ಮಾಡಿ ಕೆಂಪುಗಣ್ಣು ತುಂಬ ನೀರು ತುಂಬಿಕೊಂಡು ನಿಟ್ಟುಸಿರುಬಿಡುತ್ತ ತುಟಿ ಒಣಗಿಸಿ ನಡುಗುತ್ತ ನಿಲ್ಲುತ್ತಾಳೆ. ಈ ಸಖಿಯರ ಚೇಷ್ಟೆಯಿಂದ ನಾಯಿಕೆಯ ಸಾಂಪ್ರದಾಯಿಕವೂ ಸಂಕೇತ ಮಾತ್ರವೂ ಆದ ಮಾನ ನಿಜವೂ ಉಗ್ರವೂ ಆಗುತ್ತದೆ; ವ್ಯಾಧಿಯೇ ಆಗುತ್ತದೆ. ಇಂತಹ ಪರಿಸ್ಥಿತಿಯಲ್ಲಿ ಪ್ರಿಯನು ಏನುತಾನೇ ಮಾಡಿಯಾನು! ಆತನಿಗೆ ಎರಡೇ ಮಾರ್ಗ ಈಗ ತೆರೆದಿದೆ. ತಾನಾಗಿಯೇ ಓಡಿ ಬಂದು ಕಾಲಿಗೆ ಬಿದ್ದು ‘ಇದೋ ಅವರಿವರ ಮಾತು ನಂಬಬೇಡ, ಕಣ್ಣೆತ್ತಿ ನೋಡು, ಕಿವಿಗೊಟ್ಟು ಕೇಳು, ನಿನ್ನ ವಿಷಯದಲ್ಲಿ

ನಾನು ತಳೆದಿರುವ ಪ್ರೇಮ ನಿಶ್ಚಲವಾದದ್ದು, ನಿರ್ಮಲವಾದದ್ದು, ನಿಷ್ಕಪಟ ವಾದದ್ದು' ಎಂದು ಸಾರಬೇಕು. ಮುನಿಸು ತಿಳಿದು ಆಕೆ ಒಲವರನ್ನು ತಳೆದು ನಲ್ಲನನ್ನು ಸ್ವೀಕರಿಸಬೇಕು. ಇದು ಒಂದು ಮಾರ್ಗ. ಇನ್ನೊಂದು ಮಾರ್ಗ ತಿಳಿದೇ ಇದೆ. ನಲ್ಲನೂ ಕೋಪೋದ್ವೇಗದ ಭರದಲ್ಲಿ 'ನಿನ್ನ ದಾರಿ ನಿನಗೆ, ನನ್ನ ದಾರಿ ನನಗೆ' ಎಂದು ಹೇಳಿ ಹೊರಟುಹೋಗಬೇಕು. 'ವಿಶ್ವಾಸಾರ್ಹ ವಾದ ನನ್ನ ಪ್ರೇಮದ ಮೇಲೆ ನಿನಗೆ ನಂಬಿಕೆ ಇಲ್ಲ. ಕೊಂಡೆಯದ ನುಡಿ ಗಳನ್ನು ಆಡುವ ಸಖಿಯರ ಚುಚ್ಚುಮಾತೇ ನಿನಗೆ ಹಿತವಾಯಿತು' ಎಂದು ನುಡಿದು ನಲ್ಲನು ಪ್ರೇಯಸಿಯ ಸನ್ನಿಧಾನವನ್ನು ತ್ಯಜಿಸಿ ದೂರ ಸರಿದ ಸಂದರ್ಭಗಳೇ ಹೆಚ್ಚು. ತನ್ನ 'ಸಂಕೇತಮಾನ' ಮಿತಿಮೀರಿದುದೇ ಒಂದು ಕಾರಣವಾಗಿಯೋ ಪ್ರಿಯನ ಇಂಗಿತವನ್ನು ಅರಿಯುವ ಮರ್ಮಜ್ಞತೆ ಸಾಲ ದಿರುವುದೇ ಒಂದು ಕಾರಣವಾಗಿಯೋ ಕೆಳದಿಯರ ಕೊಂಕುನುಡಿಗಳಿಗೆ ವಿಶೇಷ ಗಮನವನ್ನು ಕೊಟ್ಟುದೇ ಒಂದು ಕಾರಣವಾಗಿಯೋ ತನ್ನ ಸಹಜ ಸ್ಫೂರ್ತಿಯ ಆ ಅಂತರ್ವಾಣಿಯನ್ನು ಮನ್ನಿಸಿ ಅದರಂತೆ ನಡೆಯದಿದ್ದುದೇ ಒಂದು ಕಾರಣವಾಗಿಯೋ ನಾಯಕನು ಹೊರಟುಹೋದ ಮೇಲೆ ತನ್ನ ಕೃತಕರ್ಮಕ್ಕೆ ಪಶ್ಚಾತ್ತಾಪಪಡುತ್ತ ನಿಟ್ಟುಸಿರುಬಿಡುವ ನಾಯಿಕೆಯರ ಹತ್ತಾರು ಚಿತ್ರಗಳನ್ನು ಅಮರು ಕವಿ ಕಂಡರಸಿದ್ದಾನೆ. ನಾಯಕನಿಂದ ತನಗೆ ದೊರೆತ ತಿರಸ್ಕಾರದ ಪ್ರಮಾಣದ ಮೇಲೆ ಈ ಪಶ್ಚಾತ್ತಾಪದ ತೀವ್ರತೆ ಅವಲಂಬಿಸಿರುತ್ತದೆ. ಓದುಗರು ಮುಂದೆ ಅನುವಾದ ಮಾಡಿ ಕೊಟ್ಟಿರುವ ಪದ್ಯಗಳಲ್ಲಿ ಸುಲಭವಾಗಿ ಇಂತಹ ಚಿತ್ರಗಳನ್ನು ಗುರುತಿಸ ಬಹುದು.

ಮಾನಧಾರಣ ಮಾಡಬೇಕೆಂದು ಸಖಿಯರು ಹೇಳಿರುತ್ತಾರೆ, ನಿಜ. ಆದರೆ ಅದೇ ಸಖಿಯರು ತಮ್ಮ ಉಪದೇಶವನ್ನು ಅಕ್ಷರಶಃ ಪರಿಪಾಲಿಸಿದ ನಾಯಿಕೆಯರಿಗೆ ಒದಗಿದ ವಿಷಮ ಪರಿಸ್ಥಿತಿಯಲ್ಲಿ ಅವರಿಗೆ ಸೂಕ್ತವಾದ ಬುದ್ಧಿವಾದವನ್ನು ನೀಡು ವುದೂ ಉಂಟು. 'ಹೀಗೆ ಬಿಕ್ಕಿ ಬಿಕ್ಕಿ ಅಳಬಾರದು, ಇನಿಯರನ್ನು ವಶಪಡಿಸಿ ಕೊಳ್ಳುವ ರೀತಿಯೇ ಬೇರೆ,' 'ಹಾಗೆ ಕಾಲಿಗೆ ಬಿದ್ದವನನ್ನು ತಿರಸ್ಕರಿಸಿದ್ದು ತಪ್ಪು,' 'ತಪ್ಪು ತಗ್ಗಿದ ಇನಿಯನಲ್ಲಿ ಇನ್ನೂ ಏಕೆ ನೀನು ಅಪರಾಧವನ್ನೇ ಎಣಿಸುತ್ತಿದ್ದೀಯೆ,' 'ಪ್ರೇಮದ ಫಲವನ್ನು ನೀನು ಗುಣಿಸಿ ನೋಡಲಿಲ್ಲ,

ಸುಹೃದರ ಮಾತು ಕೇಳಲಿಲ್ಲ, ಅಕಾಲದಲ್ಲಿ ಕೋಪತಾಳಿ ನಿನ್ನ ಮೈಮೇಲೆ ನೀನೇ ಬೆಂಕಿ ಕೆಂಡಗಳನ್ನು ಸುರಿದುಕೊಂಡೆ, ಈಗ ಅತ್ತರೇನು ಫಲ?' 'ನಿನ್ನ ಹಾಗೆಯೇ ಎಷ್ಟೋ ಹೆಂಗಸರು ಇಲ್ಲವೆ? ಅವರನ್ನು ಹೋಗಿ ಕೇಳು, ನಿನಗೆ ದಾಸನಾಗಿರುವ ನಿನ್ನ ನಲ್ಲನ ಹಾಗೆ ಅವರ ನಲ್ಲರೂ ಅವರಿಗೆ ದಾಸರಂತೆ ಇದ್ದಾರೆಯೆ?' 'ಹೊರಗೆ ನಲ್ಲನು ತಲೆತಗ್ಗಿಸಿ ನೆಲ ಕೆರೆಯುತ್ತಿದ್ದಾನಲ್ಲ, ನಾವೆಲ್ಲ ಅನ್ನ ನೀರುಬಿಟ್ಟು ಅತ್ತತ್ತು ಕೊರಗಿದ್ದೇವಲ್ಲ, ಪಂಜರದ ಶುಕ ಶಾರಿಕೆಗಳು ಕೂಡ ನಕ್ಕು ನುಡಿಯುವುದನ್ನು ಬಿಟ್ಟುಬಿಟ್ಟಿವೆಯಲ್ಲ, ನಿನ್ನ ಗತಿಯೋ ಹೀಗಾಗಿದೆಯಲ್ಲ, ಈ ಸಿಟ್ಟನ್ನು ಇನ್ನಾದರೂ ಬಿಟ್ಟುಬಿಡು.' ಹೀಗೆ ಬಗೆಬಗೆಯಾಗಿ ಬುದ್ಧಿ ಹೇಳುತಿದ್ದುವ ಸಖಿಯರೂ ಇಲ್ಲಿ ಇದ್ದಾರೆ. ನಾಯಕನ ಪರವಾಗಿ ನಾಯಿಕೆಯ ಬಳಿಗೂ ನಾಯಿಕೆಯ ಪರವಾಗಿ ನಾಯಕನ ಬಳಿಗೂ ಓಡಾಡಿ ಮತ್ತೆ ಒಬ್ಬರನ್ನೊಬ್ಬರು ಪ್ರೀತಿಸುನಂತೆ ಏರ್ಪಡಿಸುವ ಸಖಿಯರ ಮಾತೂ ಇಲ್ಲಿ ಇದೆ.

"ಮನೆಗೆ ಬರುವುದಕ್ಕಿಲ್ಲ ಆಗಲೆ ಮುಗುಳುನಗೆ ನಗುತ್ತಿದ್ದೀಯೆ. ಹೇಳಿದ ಕೆಲಸವನ್ನು ತುಟಿಪಿಟಕ್ಕೆನ್ನಿಸದೆ ತಲೆಯಲ್ಲಿ ಹೊತ್ತು ನಡಸುತ್ತಿದ್ದೀಯೆ, ನಿನ್ನ ಈ ಸುಪ್ರಸನ್ನತೆ ಕೋಪವನ್ನು ಮಾಡುವ ಒಂದು ಸೋಗು, ನಟನೆ ಎಂದು ನನಗೆ ಅನಿಸುತ್ತದೆ" "ಏಕೆ ಬಡವಾಗಿದ್ದೇಯೆ, ಏಕೆ ಮೈಕೈ ನಡುಗುತ್ತ ಇದೆ, ಏಕೆ ಮುಖ ಬಿಳಿಚಿಕೊಂಡಿದೆ" "ಕಠಿನ ಹೃದಯೆ, ಕಟ್ಟುಕಥೆ ನಂಬ ಬೇಡ, ಭ್ರಾಂತಿಯನ್ನು ಬಿಡು, ಚಾಡಿ ಮಾತು ನಂಬಿ ನನ್ನನ್ನು ಸಂಕಟ ಪಡಿಸಬೇಡ, ನೀನು ಏನು ಶಿಕ್ಷೆ ನನಗೆ ಕೊಡುತ್ತೀಯೋ ಅದನ್ನು ನಿಸ್ಸಂಕೋಚವಾಗಿ ಹೇಳು. ನಾನು ಅನುಭವಿಸುತ್ತೇನೆ. ನೀನು ನೆಮ್ಮದಿ ಯಿಂದ ಇರು." "ಏಕೆ ಚಿಂತೆ? ಏಕೆ ಆಭರಣಗಳನ್ನು ಕಳೆದಿದ್ದೀಯೆ" "ನಿನ್ನ ಕೆನ್ನೆಯ ಪತ್ರರಚನೆಯನ್ನು ನಿನ್ನ ಅಂಗೈ ಅಳಿಸಿದೆ. ನಿಟ್ಟುಸಿರು ನಿನ್ನ ತುಟಿಯ ರಸವನ್ನು ಒಣಗಿಸಿದೆ. ಗದ್ಗದ ನಿನ್ನ ಎದೆಯನ್ನು ನಡುಗಿಸುತ್ತಿದೆ. ನಾನು ಮಾಡುವ ಕೆಲಸವನ್ನೆಲ್ಲಾ ಈ ನಿನ್ನ ಕೋಪವೇ ಮಾಡಿದೆಯಲ್ಲವೆ? ಆದ್ದರಿಂದ ನಾನು ನಿನಗೆ ಪ್ರಿಯನಲ್ಲ. ಈ ಮನ್ಯುವೆ, ನಿನ್ನ ಪ್ರಿಯನು" ಎಂದು ಮುಂತಾಗಿ ಹೇಳುವ ನಾಯಕನ ಚಿತ್ರವನ್ನು ಕವಿ ಸ್ವಾರಸ್ಯವಾಗಿ ವಿವರ ವಿವರವಾಗಿ ಬಿಡಿಸಿಟ್ಟಿದ್ದಾನೆ ಈ ಮನ್ಯು ಕಥನ ಕವನಗಳಲ್ಲಿ.

ಇದೇ ರೀತಿಯಲ್ಲಿ ನಾಯಿಕೆ ನಾಯಕನನ್ನು ಕುರಿತು ಆಡುವ ಮಾತುಗಳೂ ಭಾವಪೂರ್ಣವಾಗಿವೆ. ಅವಳ ಹೃದಯದ ಇಂಗಿತವನ್ನು ಬೆಳಗಿ ತೋರುವ ಕೈಗನ್ನಡಿಗಳಾಗಿವೆ. "ಪರಿಭವದಿಂದ ಮೊಗದಿರುಹಿರುವ ನನ್ನನ್ನು ಹೀಗೆ ಬಂದು ಅಪ್ಪಿದರೆ ಏನು ಬಂತು ಭಾಗ್ಯ ? ನನ್ನ ಸೌಭಾಗ್ಯವೆಲ್ಲ ಸೂರೆಹೋಗಿದೆ. ಸವತಿಯ ಸಂಗವನ್ನು ಮಾಡಿ ಬಂದ ನೀನು ಆ ಭೋಗಚಿಹ್ನಗಳನ್ನು ಹೊತ್ತು ಬಂದು ನನ್ನನ್ನು ಅಪ್ಪಿ ಏಕೆ ಸಂಕಟಪಡಿಸುತ್ತೀಯೆ ?" "ಆಗಲಿ ಗೊತ್ತಾಯಿತು. ಏಕೆ ವೃಥಾ ಹೆಚ್ಚು ಮಾತು, ಪ್ರಿಯತಮ ! ನೀನು ದಯಮಾಡಬಹುದು, ನಿನ್ನಲ್ಲಿ ಏನೂ ತಪ್ಪಿಲ್ಲ, ಎಲ್ಲ ತಪ್ಪೂ ನನ್ನದೇ, ವಿಧಿ ನಮಗೆ ಪ್ರತಿಕೂಲನಾಗಿದ್ದಾನೆ. ಅಂತಹ ನಿನ್ನ ಪ್ರೇಮವೇ ಹೀಗಾಯಿತಲ್ಲ. ಇದರ ಮೇಲೆ ಈ ನಿರ್ಭಾಗ್ಯೆ ಹೋದರೆ ತಾನೆ ಏನು !" "ದಿನವೂ ಹೀಗೆ ಬೆಳಗಿನ ಝಾವಕ್ಕೆ ನೀನು ಬರುತ್ತ ಇದ್ದೀಯೆ. ನನ್ನ ಕಣ್ಣುಗಳೋ ನಿದ್ದೆಗೆಟ್ಟು ಗುಳಿಬಿದ್ದಿವೆ, ಮಂದಭಾಗ್ಯೆ ನಾನು. ನನ್ನ ಗೌರವ ಹೋಯಿತು. ನಾನು ಹಗುರಳಾದೆ. ಈಗಲೋ ನಾನು ಸಾಯುವುದಕ್ಕೂ ಸಿದ್ಧ. ನೀನು ತೆರಳಬಹುದು. ನನಗೆ ಏನು ತೋಚುತ್ತದೋ ಅದನ್ನು ನಾನು ಮಾಡುತ್ತೇನೆ." "ಹುಬ್ಬು ಗಂಟಿಕ್ಕಿದರೆ ಸಾಕು ಅದೇ ಕೋಪ, ಮಾತನಾಡದೆ ಬಿಮ್ಮನಿದ್ದರೆ ಸಾಕು ಅದೇ ಶಿಕ್ಷೆ. ಹಾಗೆಯೇ ಒಬ್ಬರನ್ನೊಬ್ಬರು ಕಂಡು ಮುಗುಳುನಗೆ ನಕ್ಕರೆ ಸಾಕು ಅದೇ ಅನುನಯ, ಒಬ್ಬರನ್ನೊಬ್ಬರು ನೋಡುವುದೆ ಅನುಗ್ರಹ. ಅಂತಹ ನಮ್ಮ ಒಲುಮೆ ಈಗ ಏನಾಗಿದೆ. ನೀನು ಕಾಲಮೇಲೆ ಬಿದ್ದು ಉರುಳಾಡುತ್ತಿದ್ದೀಯೆ. ನನಗೋ ಈ ಕೋಪ ಇಳಿಯದಾಗಿದೆ"; ಹೀಗೆ ಬಗೆಬಗೆಯಾಗಿ ಹೇಳುವ ನಾಯಿಕೆಯರನ್ನು ಅಮರು ಚಿತ್ರಿಸಿದ್ದಾನೆ. ಈ ಮಸ್ಯ ಕಥನವನ್ನು ಇನ್ನೊಂದು ಪದ್ಯದ ಅರ್ಥವನ್ನು ಉದಾಹರಿಸಿ ಮುಗಿಸಬಹುದು. ಇದೊಂದು ನಾಯಕ ನಾಯಿಕೆಯರ ಉಕ್ತಿ ಪ್ರತ್ಯುಕ್ತಿ ರೂಪವಾದ ವಾಕ್ಯಮಾಲೆ. ಇದರ ಸ್ವಾರಸ್ಯವನ್ನು ನೋಡಿ :

ನಾಯಕ—ಬಾಲೆ !

ನಾಯಿಕೆ—ನಾಥ !

ನಾಯಕ—ಮಾನಿನಿ ! ಕೋಪವನ್ನು ಬಿಡು.

ನಾಯಿಕೆ—ಕೋಪಗೊಂಡು ನಾನು ಏನು ತಾನೆ ಮಾಡಿದೆ ;

ನಾಯಕ—ನಮಗೆ ದುಃಖವನ್ನು ಉಂಟುಮಾಡಿದೆ.

ನಾಯಿಕೆ—ನಿನ್ನಿಂದ ನನಗೆ ಯಾವ ತಪ್ಪೂ ಆಗಿಲ್ಲ. ಎಲ್ಲ ತಪ್ಪೂ ನನ್ನದೇ.

ನಾಯಕ—ಹಾಗಾದರೆ ಏಕೆ ಮತ್ತೆ ಬಿಕ್ಕಿಬಿಕ್ಕಿ ಅಳುತ್ತಿದ್ದೀಯೆ ?

ನಾಯಿಕೆ—ಯಾರ ಮುಂದೆ ನಾನು ಅಳುತ್ತಿದ್ದೇನೆ ?

ನಾಯಕ—ನನ್ನ ಮುಂದೆ ಅಲ್ಲವೆ ?

ನಾಯಿಕೆ—ನಿನಗೆ ನಾನು ಯಾರು ?

ನಾಯಕ—ಪ್ರಿಯೆ.

ನಾಯಿಕೆ—'ಪ್ರಿಯಳು ಆಗಿಲ್ಲವಲ್ಲ' ಎಂದೇ ಅಳುತ್ತಿದೇನೆ.

ಈ ಮನ್ಯುಕಥನದ ಚಿತ್ರಗಳ ರೀತಿಯಲ್ಲಿಯೇ ವಾಚಕರು ಪ್ರವಾಸ ಭೋಗ ಕಥನಗಳ ಚಿತ್ರಗಳನ್ನು ವಿವರವಾಗಿ ಅಭ್ಯಾಸಮಾಡಿದರೆ ಅಮರುವಿನ ಶ್ಲೋಕಗಳ ಸ್ವಾರಸ್ಯ ಮನವರಿಕೆಯಾಗುತ್ತದೆ.

೭

ಅಮರುಶತಕದ ಪದ್ಯಗಳೆಲ್ಲವೂ 'ಮುಕ್ತಕ'ಗಳು. 'ಬಿಡಿಮುತ್ತು'ಗಳು. ಒಂದೊಂದೂ ಪ್ರತ್ಯೇಕವಾದ ಒಂದು ಚಿತ್ರ. ಒಂದು ಭಾವ, ಅಲ್ಲಿ ಪ್ರಧಾನ ವಾಗಿರುತ್ತದೆ. ಇಂತಹ ಚಿತ್ರ ತನಗೆ ತಾನೇ ಪರಿಪೂರ್ಣವಾಗಿ ಸ್ವತಂತ್ರವಾಗಿ ನಿಂತಿರುತ್ತದೆ. ಕಥೆ, ರಚನೆ, ವಿವರಣಗಳನ್ನೆಲ್ಲ ಕಳಚಿಕೊಂಡು ಭಾವಪ್ರಚುರ ವಾಗಿ ಧ್ವನಿ ಪ್ರಧಾನವಾಗಿ ರಸಗಮ್ಯವಾಗಿ ಈ ಚಿತ್ರಗಳು ವಿರಾಜಿಸುತ್ತವೆ. ಆದ್ದರಿಂದ ಇಂತಹ ಪದ್ಯಗಳನ್ನು ಓದುವವರು ತಮ್ಮ ತಮ್ಮ ವಿದ್ಯೆ, ಬುದ್ಧಿ, ನಾಗರಿಕತೆ, ಸಂಸ್ಕಾರ, ಲೋಕಾನುಭವ, ಅಭಿರುಚಿ, ಇವುಗಳಿಗೆ ತಕ್ಕಂತೆ ಒಂದು ಆವರಣವನ್ನು ಮೊದಲು ಕಲ್ಪಿಸಿಕೊಳ್ಳಬೇಕು. ತಮ್ಮ ಪ್ರತಿಭಾಶಕ್ತಿ ಯಿಂದ ನಿರ್ಮಾಣಗೊಂಡ ಒಂದು ಆವರಣದ ಕುಂದಣದಲ್ಲಿ ಈ ಭಾವ ರತ್ನವನ್ನು ಇಟ್ಟು ನೋಡಬೇಕು.

'ನನ್ನ ನಲ್ಲನು ಬಂದು ಎದುರೊಳು ನಿಂದು ನಲ್ಮೆಯ ಸವಿಯ ನುಡಿಯೊರೆಯೆ
ನನ್ನ ಇಂದ್ರಿಯವೆಲ್ಲ ಕಣ್ಣಾಗುವುದೊ ಕಿವಿಯಾಗುವುದೊ ನಾನರಿಯೆ.

ಈ ಮೇಲಣ ಎರಡು ಚರಣಗಳಲ್ಲಿ ಎಂತಹ ಸೊಗಸಾದ ಭಾವ ಮೂಡಿ ಬಂದಿದೆ! ಇದರ ಸ್ವಾರಸ್ಯವನ್ನು ಸರಿಯಾಗಿ ಗ್ರಹಿಸಬೇಕಾದರೆ ನಾವು ಈ ಕವನದ ಹಿನ್ನಲೆಯೊಂದನ್ನು ಕಲ್ಪಿಸಿಕೊಳ್ಳಬೇಕು. ಒಬ್ಬ ಪ್ರಥಮಾನುರಾಗಿಣಿ ಈ ಮಾತು ಆಡುತ್ತಿದಾಳೆ. ಆಕೆ ಮುಗ್ಧೆ, ಪ್ರಿಯಾನುವರ್ತಿನಿ. ಒಲುಮೆಯ ಹೊಚ್ಚಹೊಸತೆನುವ ಅನುಭವವನ್ನು ಪಡೆದವಳು, ಹೀಗೆಲ್ಲ ಊಹಿಸಿಕೊಳ್ಳ ಬೇಕು. ಅವಳ ಪ್ರಿಯ ಅನುಕೂಲ ನಾಯಕ ಎಂದು ಅರ್ಥೈಸಬೇಕು; ತನ್ನ ಸಖಿಯರ ಮುಂದೆ ಹೆಮ್ಮೆಯಿಂದ ಹೀಗೆ ಆಡಿಕೊಳ್ಳುತ್ತಿದಾಳೆ ಎಂದು ಕಲ್ಪಿಸಿಕೊಳ್ಳಬೇಕು. ಆಗ ನಮಗೆ ಈ ಕವಿತೆಯ ಸೊಗಸು ವೇದ್ಯವಾಗು ತ್ತದೆ. ವೈಭವಪೂರ್ಣವೂ ರಮ್ಯೋಜ್ವಲವೂ ಆದ ಪ್ರಣಯಪ್ರಪಂಚದಲ್ಲಿ ನೂತನವಾಗಿ ಪದಾರ್ಪಣಮಾಡಿದ ತರುಣ ತರುಣಿಯರ ಮನಸ್ಸಿನಲ್ಲಿ ತರುಣ ನಿಗೆ ತರುಣಿಯೇ ಪ್ರಪಂಚಸರ್ವಸ್ವ, ತರುಣನೇ ಸರ್ವಪ್ರಪಂಚ ಎನ್ನುವುದನ್ನು ಈ ಎರಡು ಚರಣದ ಪುಟ್ಟ ಪದ್ಯದಲ್ಲಿ ಎಷ್ಟು ಅಡಕವಾಗಿ ಕವಿ ಅಡಗಿಸಿಟ್ಟಿ ದ್ದಾನೆ! ಸ್ಮರರಾಜ್ಯದಲ್ಲಿ ವಿಹರಿಸುತ್ತಿರುವ ಪ್ರಣಯಿ ಜನರ ಉತ್ಸಾಹ ಪೂರ್ಣವಾದ ಚೇತನಸ್ವರೂಪದ ಎಂತಹ ಸುಂದರ ಚಿತ್ರ ಇದು!

ಹೀಗೆ ಒಂದೋದು ಪದ್ಯಕ್ಕೂ ಉಚಿತವಾದ ಹಿನ್ನೆಲೆಯೊಂದನ್ನು ಕಟ್ಟಿಕೊಂಡಲ್ಲದೆ ಪದ್ಯದ ಪೂರ್ಣಾರ್ಥ ಗ್ರಾಹ್ಯವಾಗುವುದಿಲ್ಲ. ಪ್ರವಾಸ ಕಥನದ ಯಾವ ಚಿತ್ರವನ್ನಾದರೂ ತೆಗೆದುಕೊಳ್ಳಿ. ಆ ಒಂದೊಂದು ಚಿತ್ರಕ್ಕೂ ಒಂದು ಹಿನ್ನೆಲೆಯನ್ನು ಪ್ರಭಾವಳಿಯಂತೆ ಹೆಣೆದುಕೊಳ್ಳಬೇಕು. ಈಗ ನಮಗೆ ಪ್ರಯಾಣ ಸುಲಭವಾಗಿದೆ. ನಾನಾವಿಧವಾದ ವೈಜ್ಞಾನಿಕ ಯಂತ್ರೋಪಕರಣಗಳಿವೆ, ವಾಹನ ಸೌಕರ್ಯಗಳಿವೆ, ಸುಖಕರವಾದ ಸಂಚಾರ ಮಾರ್ಗಗಳಿವೆ. ವಾರ್ತೆಗಳ ಓಡಾಟಕ್ಕೆ ಏರ್ಪಾಟಿದೆ. ಸಾವಿರಾರು ಮೈಲಿ ಆಚೆಯ ವಿದೇಶಕ್ಕೆ ಹೊರಟ ಪ್ರವಾಸಿಯ ವಿಷಯದಲ್ಲಿ ಕೂಡ ನಾವು ನಿಶ್ಚಿಂತೆಯಿಂದ ಇರಬಹುದು. ಇಂದಿನ ಈ ವಿಜ್ಞಾನ ಯುಗದಲ್ಲಿ ಅಮರುವಿನ ಪ್ರವಾಸಕಥನದ ಚಿತ್ರಗಳಲ್ಲಿ ಬರುವ ಪಾಂಥನಾಗಲಿ ಪಥಿಕ ಸ್ತ್ರೀಯಾಗಲಿ ವ್ಯಂಗ್ಯ ಚಿತ್ರದಂತೆ ಕಾಣಬಹುದು. ಆದರೆ ಈ ನವೀನ ಆವರಣದಲ್ಲಿ ಆ ಚಿತ್ರ ಗಳನ್ನು ಕೂರಿಸಬಾರದು. ಪ್ರಾಚೀನ ಭಾರತವರ್ಷದಲ್ಲಿ ಸಾವಿರ ತೆರನಾದ ಅಡ್ಡಿ ಅಡಚಣೆಗಳಿದ್ದ ಕಾಲದಲ್ಲಿ ಊರಿಂದೂರಿಗೆ ಹೊರಟುನಿಂತ ಪ್ರವಾಸಿ

ಯನ್ನು ಇಲ್ಲಿ ನಾವು ನೆನೆಯಬೇಕು. ಸಾವಿರದ ಐನೂರು ವರುಷಗಳ ಹಿಂದೆ ನಮ್ಮ ದೇಶದ ಪ್ರವಾಸ ವ್ಯವಸ್ಥೆಯ ಹಿನ್ನೆಲೆಯನ್ನು ಕಲ್ಪಿಸಿಕೊಳ್ಳಬೇಕು. ಕಳ್ಳಕಾಕರ ಹಾವಳಿ, ದುಷ್ಟಮೃಗಗಳ ಕಾಟ, ರೋಗಾದ್ಯುಪದ್ರವ, ಕಾಡು, ಬೆಟ್ಟ, ಹೊಳೆ ಪ್ರವಾಹಾದಿಗಳು, ಗಾಳಿ ಮಳೆ ಬೆಂಕಿ ಬಿಸಿಲು, ಈ ಮುಂತಾದ ಅಡ್ಡಿ ಆಪತ್ತುಗಳ ನಡುವೆ ಪರದೇಶ ಪ್ರಯಾಣ ಪರಲೋಕ ಪ್ರಯಾಣಕ್ಕೆ ಕಡಿಮೆಯಲ್ಲದ ಕಳವಳ ಕಾತರಗಳನ್ನು ಮನಸ್ಸಿನಲ್ಲಿ ಮೂಡಿಸುತ್ತಿದ್ದರೆ ಆಶ್ಚರ್ಯವೇನಿಲ್ಲ. ಆಗಿನ ಆ ದಿನಗಳನ್ನು ನೆನೆದು ಮನದನ್ನನು ಪ್ರವಾಸ ಹೊರಟಾಗ ಮನದನ್ನೆ ಹೇಗೆ ಖಿನ್ನೆಯಾದಳು ಎಂಬುದನ್ನು ಊಹಿಸಿಕೊಂಡು ಬಳಿಕ ಇಂತಹ ಪ್ರವಾಸ ಪದ್ಯಗಳನ್ನು ಓದಿಕೊಳ್ಳಬೇಕು. ಆಗ ಅಮರುವಿನ ಪದ್ಯ ಎಷ್ಟು ಹೃದಯಸ್ಪರ್ಶಿ, ಎಷ್ಟು ರಸಸ್ಯಂದಿ ಎಂಬ ಅಂಶ ನಮಗೆ ಹೊಳೆಯುತ್ತದೆ. ಆಗ ಆ ನಾಯಿಕೆಯ ಕರುಣಾಜನಕವಾದ ಹೃದಯದ ಆರ್ತನಾದ ನಮ್ಮ ಮನಸ್ಸನ್ನು ಕರಗಿಸುತ್ತದೆ.

ಹೀಗೆ ಪದ್ಯಕ್ಕೆ ಆವರಣ ಕಲ್ಪನೆ ಮುಖ್ಯ ಎನ್ನುವುದಕ್ಕೆ ಇನ್ನೂ ಒಂದು ಉದಾಹರಣೆ ಕೊಟ್ಟು ವಿವರಿಸಬಹುದು. 'ಮೊಗವ ತಗ್ಗಿಪಳೊಗೆದ ವಿನಯದೊಳಿನಿಯ ಹಿಡಿಯಲು ಸೆರಗನು' ಎಂಬ ಚಿತ್ರವನ್ನು ನೆನೆಯಿರಿ. ಇಲ್ಲಿಯೂ ಪದ್ಯದ ಸ್ವಾರಸ್ಯ ಗ್ರಹಣಕ್ಕೆ ಪ್ರಾಚೀನ ಭರತ ವರ್ಷದ ಸಮಾಜ ವ್ಯವಸ್ಥೆಯ ಅವಿಭಕ್ತ ಕುಟುಂಬದ ತುಂಬು ಸಂಸಾರದ ಹೊಸ ಮದುಮಗ ಳೊಬ್ಬಳ ಕಥೆಯೊಂದನ್ನು ಊಹಿಸಿಕೊಳ್ಳಬೇಕಾಗುತ್ತದೆ. ನಮ್ಮ ಸಮಾಜ ಜೀವನ ವಿದ್ಯುದ್ವೇಗದಿಂದ ಬದಲಾವಣೆ ಹೊಂದುತ್ತಿದೆ. ಈಗಿನ ದಿನಗಳಲ್ಲಿ ಯಾವುದೋ ಕೃತಕ ರೀತಿಯ ವ್ಯವಹಾರದಲ್ಲಿ ಪಳಗಿದಂತಿರುವ ನಮ್ಮ ತಲೆಮೊರೆಯ ಜನಕ್ಕೆ ಹೊಸದಾಗಿ ಮದುವೆಯಾಗಿರುವ ಹೆಣ್ಣುಮಗಳ ನಾಚಿಕೆ, ಸಂಕೋಚ, ಅಂಜಿಕೆ, ಶಂಕೆ, ಒಳಸರಿಯುವಿಕೆ ಇವುಗಳನ್ನು ಕುರಿತಾದ ಮಾತು ಹೆಚ್ಚು ಎನ್ನಿಸಬಹುದು. ಆದರೆ ಅಮರು ಹೆಣ್ಣಿನ ಜೀವನದ ಈ ಪ್ರಥಮ ನರ್ಮಾರಂಭದ ವ್ರೀಡಾ ವ್ಯಾಕುಲವನ್ನು ಹೇಗೆ ಅಳಿಸಲಾರದ ಶಬ್ದಚಿತ್ರವನ್ನಾಗಿ ಮಾಡಿ ಹಾಡಿದ್ದಾನೆ ಎಂಬುದನ್ನು ಅರಿತು ಕೊಳ್ಳಬೇಕಾದರೆ ಉಚಿತವಾದ ಒಂದು ಊಹೆಯ ವಲಯವನ್ನು ಕಟ್ಟಿಕೊಳ್ಳ ಬೇಕು. ಅಮರುವಿನ ಈ ಎಲ್ಲ ಪದ್ಯಗಳೂ ಇಂತಹವುಗಳೇ. ಶಯ್ಯಾಗಾರದ

ಒಂದು ಮಗ್ಗುಲಿನ ಕಾಲ್ಮಣೆಯ ಮೇಲೆ ಹೊತ್ತಿಸಿಟ್ಟ ಸುಗಂಧಮಯವಾದ ಧೂಪದ್ರವ್ಯದ ಧೂಮ ಕ್ರಮಕ್ರಮವಾಗಿ ಸೆಜ್ಜೆಯ ಆವರಣವನ್ನೆಲ್ಲ ಆಕ್ರಮಿಸಿ ಪರಿಮಳಯುಕ್ತವನ್ನಾಗಿ ಮಾಡಿ ತೆಳುವಾದ ಒಂದು ಕಂಪಿನ ಪರಿಣಾಮ ಸುಖವನ್ನು ನಮಗೆ ಒದಗಿಸಿಕೊಡುವಂತೆ ಈ ಪದ್ಯಗಳ ಭಾವ ಸ್ವಲ್ಪ ಸ್ವಲ್ಪವಾಗಿ ನೆನೆಸೆನೆದಂತೆ ಹಿಗ್ಗುತ್ತ ಹಿಗ್ಗುತ್ತ ಕಮನೀಯವೂ ಆಪ್ಯಾಯಮಾನವೂ ಆದ ಒಂದು ಭಾವದಲಂಪಿನ ಸುಖದಲ್ಲಿ ನಮ್ಮನ್ನು ಪರವಶಗೊಳಿಸುತ್ತದೆ.

೮

ಭರತ ವರ್ಷದ ಪ್ರೇಮಕಾವ್ಯ ಸಮೂಹದಲ್ಲಿ ಅಮರುಕವಿಯ ಈ ಶತಕಕ್ಕೆ ಒಂದು ವಿಶಿಷ್ಟವಾದ ಸ್ಥಾನವಿದೆ. ಪ್ರೇಮವೂ ಕೂಡ ಕಾವ್ಯದ ವಿಷಯವಾಗಬಲ್ಲುದು, ಕೇವಲ ಒಂದೆರಡು ಪದ್ಯಗಳಲ್ಲ, ನೂರಾರು ಪದ್ಯಗಳನ್ನಾದರೂ ಈ ಪ್ರೇಮವನ್ನು ಕುರಿತು ಹಾಡುವುದು ಸಾಧ್ಯ ಎನ್ನುವುದನ್ನು ಈ ಶತಕ ಲೋಕಕ್ಕೆ ಮೊಟ್ಟಮೊದಲು ಸಾರಿತು. ಅಷ್ಟೇ ಅಲ್ಲ, ಪದ್ಯರೂಪವಾದ ಈ ಪ್ರೇಮಃಕಾವ್ಯಸೃಷ್ಟಿಯ ಒಂದು ಉದ್ಘಾಟನ ಸಮಾರಂಭವನ್ನೇ ಅಮರು ತನ್ನ ಕೃತಿನಿರ್ಮಾಣದಿಂದ ಮಾಡಿದನೆನ್ನುವುದು ಅವನ ಹಿರಿಮೆಯ ಇನ್ನೊಂದು ಬಣ್ಣದ ಗರಿ. ಇರುವ ಒಂದು ಮಿತಿಯಲ್ಲಿ ಅಮಿತವಾದ ಧ್ವನಿಪ್ರಾಚುರ್ಯವುಳ್ಳ ಒಂದು ಭಾವವನ್ನು ಮಾತ್ರ ಉದ್ದೇಶಿಸಿ ಹಾಡಿರುವ ಈ ಕೌಶಲ ತುಂಬ ಶ್ರೇಷ್ಠವಾದದ್ದು. ಈ ನಯಗಾರಿಕೆ, ಈ ಕುಸುರಿಕೆಲಸ, ಈ ಎರಡಂಗುಲ ಅಗಲದ ದಂತದ ಕೆತ್ತನೆಯಂತಹ ನುಣುಪುನಾಜೂಕು ಅಮರುವಿನ ಇನ್ನೊಂದು ಅಗ್ಗಳಿಕೆ. ಈ ಶಬ್ದಶಿಲ್ಪ ಸುಲಭಸಾಧ್ಯವೆಂದು ಭಾವಿಸಬಾರದು. ಹೀಗೊಂದು ಹಾಗೊಂದು ಗೆರೆ ಎಳೆದು ಕುಂಚದ ನಾಲ್ಕಾರು ಕೈಯಾಡಿಕೆಯಷ್ಟರಿಂದಲೆಯೆ ಭಾವಪೂರ್ಣವಾದ ರೇಖಾ ಚಿತ್ರವನ್ನು ಮೂಡಿಸಬಲ್ಲ ಕುಶಲ ನಿರ್ಮಾಣ ಶಕ್ತಿ ಕವಿಗೆ ಇರಬೇಕಾಗುತ್ತದೆ. ಹಿತವೂ ಮಿತವೂ ಮೃದುವೂ ಉಚಿತವೂ ಆದ ಪದಗಳನ್ನು ಆಯ್ದು ಪೋಣಿಸಬೇಕು. ಪದಗಳ ಜೋಡಣೆಯ ಕ್ರಮದಿಂದಲೇ ಒಂದು ಅರ್ಥ ಧ್ವನಿಸುವಂತಿರಬೇಕು. ನಾದಮಾಧುರ್ಯ ಇರಬೇಕು. ಛಂದಸ್ಸು ವಿಷಯಾನುಗುಣವಾಗಿದ್ದು ಅದೂ ಕುರಿಯುವ ಭಾವ ಪ್ರಕಾಶನಕ್ಕೆ ತನ್ನ ಪಾಲಿನ ದೀಪ ಸೇವೆ ಸಲ್ಲಿಸಬೇಕು.

ಕಾವ್ಯದ ಆತ್ಮ 'ರಸಧ್ವನಿ', ನಿಜ. ಆದರೆ ಇಂತಹ ಕವಿತೆಗಳಲ್ಲಿ ರೀತಿ, ಶೈಲಿ, ಪಾಕ, ಶಯ್ಯೆ, ಮಾರ್ಗ, ಅಲಂಕಾರ, ಪ್ರಾಸ, ನಾದ, ಲಯಗತಿ, ಲಲಿತ ಪರುಷಾಕ್ಷರಗಳ ಪ್ರಯೋಗ, ಪದಪುಂಜನಿರ್ಮಾಣ, ಶಬ್ದಜೋಡಣೆಯ ಕ್ರಮ ಈ ಮುಂತಾದವು ಒಂದೊಂದೂ ಕಾವ್ಯದ 'ಆತ್ಮ'ವೇ ಆಗಿವೆ ಎನ್ನುವಷ್ಟರಮಟ್ಟಿನ ಅರ್ಹತೆ ಅವುಗಳಿಗೆ ಬರುವಂತಹ ರೀತಿಯಲ್ಲಿ ಅವುಗಳು ಕಾವ್ಯದಲ್ಲಿ ಪ್ರಯೋಗಗೊಂಡಿರಬೇಕು. ಆ ವಿವರ ಈ ವಿವರ ಎಂದು ಮಾತು ಹೆಚ್ಚು ಹಾಕುವಂತಿಲ್ಲ, ವರ್ಣನೆ ವ್ಯಾಖ್ಯಾನಗಳಿಗೆ ಕೈ ಹಾಕುವಂತಿಲ್ಲ, ಒಂದು ಶಬ್ದವನ್ನೂ ವ್ಯರ್ಥವಾಗಿ ಬಳಸುವಂತಿಲ್ಲ. ಯಾವುದನ್ನು ಹೇಳಿದರೆ, ಎಷ್ಟು ಹೇಳಿದರೆ, ಹೇಗೆ ಹೇಳಿದರೆ ತಾನು ಹೇಳಬೇಕೆಂದಿರುವುದರ ಕಲ್ಪನೆ ರಮ್ಯೋಜ್ವಲ ಚಿತ್ರವಾಗಿ ವಾಚಕರ ಮನಸ್ಸಿನಲ್ಲಿ ಸರಿಯಾಗಿ ಧ್ವನಿತವಾಗುತ್ತದೆ ಎಂಬುದನ್ನು ಕವಿ ಅರಿತು ಕೆಲಸ ಮಾಡಬೇಕಾಗುತ್ತದೆ. ಪುಟ್ಟದೇಹ, ಆ ಪುಟ್ಟ ದೇಹಕ್ಕೆ ಒಪ್ಪುವ ಒಂದು ಪುಟ್ಟಕೈ, ಆ ಮಾಟವಾದ ಪುಟ್ಟ ಕೈಯಲ್ಲಿ ಒಂದು ಕೂರಲಗು ಎಂದು ದೊಡ್ಡವರು ಹೇಳುವ ಮಾತು ಇಂತಹ ಪದ್ಯಗಳಿಗೆ ಚೆನ್ನಾಗಿ ಒಪ್ಪುತ್ತದೆ. ವಾಮನನಲ್ಲಿಯೇ ತ್ರಿವಿಕ್ರಮ ಅಡಗಿದ್ದಂತೆ ಈ ಕವಿತೆಗಳ ಚಿಕ್ಕ ಚಿಕ್ಕ ಚರಣಗಳಲ್ಲಿಯೆ ವಿಶ್ವವ್ಯಾಪಕವೂ ಚಿತ್ತಾಕರ್ಷಕವೂ ಆದ ಧ್ವನಿ ಅಡಗಿ ಕುಳಿತಿರುತ್ತದೆ. ಪ್ರಥಮ ಸಂದರ್ಶನ, ಪ್ರೇಮಾಂಕುರ, ಸಮಾಗಮ, ವಿಯೋಗ, ಮೆಚ್ಚು, ನೆಚ್ಚು, ಆಸೆ, ನಿರಾಸೆ, ನಿರೀಕ್ಷೆ, ಮಿಲನ, ತಿರಸ್ಕಾರ, ಅಗಲಿಕೆ, ಅಸೂಯೆ, ಸಮಾಧಾನ, ತೀಕ್ಷ್ಣಪರಿತಾಪ, ಹೀಗೆ ಹಲವಾರು ತೆರನಾದ ಪ್ರಣಯ ಜೀವನದ ರೀತಿನೀತಿಗಳ ವಿವರಗಳನ್ನು ಕವಿ ಮುಕ್ತಕಗಳೆಂಬ ಈ ಬಿಡಿ ಕವನಗಳಲ್ಲಿ ಕೊಟ್ಟಿದ್ದಾನೆ. "ವರ್ಣರಂಜಿತವಾದ ಇಂದ್ರ ಚಾಪದಂತಹ ಪ್ರಣಯಿ ಜನರ ಚಿತ್ತವೃತ್ತಿಯ ಚಿತ್ತಾಕರ್ಷಕ ಚಿತ್ರ ಬೇಕೆ? ಇಲ್ಲಿದೆ ಬನ್ನಿ. ಪ್ರಿಯ ಪ್ರೇಯಸಿಯರ ವಿರಹ ವ್ಯಥೆಯ ದಾರುಣ ಕಥೆಯ ವಿಷಾದ ಸ್ಥಿತಿಯ ಕದ್ದಿಂಗಳ ನೋಟ ಬೇಕೆ? ಇಲ್ಲದೆ, ನೋಡಿ. ಬಿಸಿಲೆ? ಬೆಳುದಿಂಗಳೆ? ಮುಳ್ಳೆ? ಮಲ್ಲಿಗೆಯೆ? ನೋವೆ? ನಲಿವೆ? ನಗೆಯೆ? ಅಳುವೆ? ಸರಸವೆ? ವಿರಸವೆ? ಪ್ರೇಮಜೀವನದ ಯಾವ ವಿವರಬೇಕಾದರೂ ಈ ಪದ್ಯದ ಪುಟಗಳನ್ನು ತಿರುವಿಹಾಕಿರಿ." ಹೀಗೆಂದು ಅಮರು ತೋಳೆತ್ತಿ ಉದ್ಘೋಷಿಸಿ ಕೂಗಿ ಕರೆವಂತೆ ತೋರುತ್ತದೆ.

೯

ತನ್ನ ಪದ್ಯಗಳಲ್ಲಿ ಬಳಸಿರುವ ಸಂಬೋಧನೆ ಕೂಡ ಅರ್ಥವತ್ತಾಗಿರುವಂತೆ ಅಮರು ನೋಡಿಕೊಂಡಿದ್ದಾನೆ. ಸುಂದರಿ! ಮುಗ್ಧಾಕ್ಷಿ! ಸುತನು! ಕರಭೋರು! ಬಾಲೆ! ಮುಗ್ಧೆ! ಕಾತರೆ! ತರಳೆ! ಸರಳೆ! ಚಪಲಹೃದಯೆ! ಕೋಪನೆ! ಕಠಿನೆ! ನಿರನುರೋಧೆ! ಆತ್ಮದ್ರೋಹಿಣಿ! ಈ ಒಂದೊಂದು ಪದವೂ ಆ ಪದ್ಯದಲ್ಲಿ ಕುರಿತ ನಾಯಿಕೆಯ ಸ್ಥಿತಿಯನ್ನು ಎಷ್ಟು ಸೂಚ್ಯವಾಗಿ ಪರಿಚಯಮಾಡಿಕೊಡುತ್ತದೆ! ಹೀಗೆಯೇ ಈ ಕವಿ ಉಪಯೋಗಿಸಿರುವ ಕರ್ತೃಪದಗಳನ್ನೂ ನೋಡಬೇಕು. ಬಾಲೆ, ದಯಿತೆ, ವಧು, ಚತುರೆ, ಮುಗ್ಧಾಕ್ಷಿ, ಮುಗ್ಧೆ, ತರಳೆ, ನವವಧು, ತನ್ವಿ, ಸಾರಂಗಾಕ್ಷಿ, ಪಾಂಥಸ್ತ್ರೀ, ತನ್ವಂಗಿ, ಧೂರ್ತ, ನಾಥ, ಪಾಂಥ, ದಯಿತ—ಇವೂ ಅರ್ಥಪುಷ್ಟಿಗೂ ಭಾವಪ್ರಕಾಶನಕ್ಕೂ ಸಹಾಯಕವಾಗುವಂತಹ ರೀತಿಯಲ್ಲಿ ಪ್ರಯೋಗ ಗೊಂಡಿವೆ. 'ಉರಸಿ ನಿಹಿತಸ್ತಾರೋಹಾರಃ ಕೃತಾ ಜಘನೇ ಘನೇ। ಕಲಕಲವತೀ ಕಾಂಚೀ ಪಾದೌ ರಣನ್ಮಣಿನೂಪುರೌ', 'ಕೋಪಾತ್ ಕೋಮಲ ಲೋಲ ಬಾಹುಲತಿಕಾ ಪಾಶೇನ ಬಧ್ವಾದೃಢಂ'। 'ಅಂಗಾನಾಮತಿತಾನವಂ ಕುತ ಇದಂ ಕಸ್ಮಾದಕಸ್ಮಾದಿದಂ'।, 'ಸ್ಫುಟತು ಹೃದಯಂ ಕಾಮಃ ಕಾಮಂ ಕರೋತು ತನುಂ ತನುಂ' 'ಮಲಯಮರುತಾಂ ವ್ರಾತಾ ವಾತಾ ವಿಕಾಸಿತ ಮಲ್ಲಿಕಾ' 'ಪ್ರಾಸಾದೇ ಸಾ ದಿಶಿದಿಶಿ ಚ ಸಾ ಪೃಷ್ಠತಃ ಸಾ ಪುರಃ ಸಾ। ಪಥಿಪಥಿ ಚ ಸಾ ತದ್ವಿಯೋಗಾತುರಸ್ಯ'—ಈ ಮುಂತಾದ ಪದ್ಯಗಳಲ್ಲಿರುವ ನಾದಮಾಧುರ್ಯ, ಪದಪುಂಜದ ಲಾಲಿತ್ಯ, ಮುಂತಾದವುಗಳನ್ನು ಪರಿಭಾವಿಸಬೇಕು.

'ಹೊರಗೆ ನಲ್ಲನು ತಲೆಯ ತಗ್ಗಿಸಿ. . . .' 'ಮುಳಿದ ದಯಿತೆ ತೊನೆವ ಬಳ್ಳಿದೋಳ. . . .', 'ಗಂಡಹೆಂಡಿರು ರಾತ್ರೆ ಆಡಿದ. . . .', 'ಒಂದೆ ಹಾಸಿ ನೊಳನಿಯರಿಬ್ಬರು', 'ನೀಳಮಾಲೆಯ ನೋಟದೊಳೆ. . . .', 'ತಪ್ಪಿತಸ್ಥನು ನಲ್ಲ. . . .', 'ಬಾಲೆ. . . ನಾಥನೆ. . . .', 'ಹಣೆಯೊಳಲತಿಗೆ. . . .' 'ಮುಗ್ಧೆ! ಮುಗ್ಧತೆಯಿಂದಲೇ. . . .', 'ಕಣ್ಣು ಹರಿಯುವತನಕ. . . .', 'ಶಯನ ಮಂದಿರ ಶೂನ್ಯವಾದುದನರಿದು. . . .', 'ನಿನ್ನ ಕೆನ್ನೆಯ ಪತ್ರ ರಚನೆಯು. . . .', 'ಕಪ್ಪಿದಲ್ಲವೆ ? ಕಪ್ಪು. . . .' ಈ ಕೆಲವು ಪದ್ಯಗಳು ಎಲ್ಲ

ರೀತಿಯಿಂದಲೂ ಸರ್ವಾಂಗಸುಂದರವಾದ ಭಾವಗೀತಗಳಾಗಿವೆ. ಉಜ್ವಲವಾದ ಕಲ್ಪನೆ ಕುಣಿಯುತ್ತಿದೆ ಈ ಕವಿತೆಗಳಲ್ಲಿ.

ವಸಂತತಿಲಕ, ವಂಶಸ್ಥ, ಮಾಲಿನಿ, ಮಂದಾಕ್ರಾಂತ, ಶಿಖರಿಣಿ, ಹರಿಣಿ, ಅನುಷ್ಟುಬ್, ಸ್ರಗ್ಧರೆ—ಈ ವೃತ್ತಗಳನ್ನು ಮೂಲದಲ್ಲಿ ಕವಿ ಅಲ್ಲಲ್ಲಿ ಬಳಸಿ ವಿವಿಧವೃತ್ತದ ನರ್ತನಲಯದ ನಾವೀನ್ಯವನ್ನು ಒಡ್ಡಿದ್ದಾನೆ. ಅರ್ಧಕ್ಕೂ ಹೆಚ್ಚು ಪದ್ಯಗಳನ್ನು ಶಾರ್ದೂಲ ವಿಕ್ರೀಡಿತ ವೃತ್ತದಲ್ಲಿ ರಚಿಸಿದ್ದರೂ ಈ ವಿವಿಧ ವೃತ್ತಗಳ ಬಳಕೆಯಿಂದ ತಂದುಕೊಂಡಿರುವ ವೈವಿಧ್ಯದಲ್ಲಿಯೂ ವಿಮರ್ಶಕರು ಸ್ವಾರಸ್ಯವನ್ನು ಗುರುತಿಸಬಹುದು.

೧೦

ಅಮರುವಿನ ಪ್ರಣಯ ನಿರೂಪಣೆಯಲ್ಲಿ ಇವು ವಿಶೇಷ ಲಕ್ಷಣಗಳು ಎಂದು ಬೆರಳಿಟ್ಟು ತೋರಿಸಬಹುದಾದ ಅಂಶಗಳಲ್ಲಿ ಒಂದೆರಡನ್ನು ಈ ಮುಂದೆ ಕಾಣಿಸಿದ್ದೇನೆ. ಪ್ರೇಮ ಜೀವನದಲ್ಲಿ ಒದಗಬಹುದಾದ ವಿರಸಗಳಿಗೆ ಹೆಣ್ಣು ಕಾರಣವಲ್ಲ ಗಂಡು ಕಾರಣ ಎನ್ನುವುದು ಈ ಕೃತಿಯಲ್ಲಿ ಕಾಣುವ ಒಂದು ಹೊಸ ಅಂಶ. ಭಾರತದ ಜನಪ್ರಿಯವಾದ ಪೂರ್ವದ ಕಥೆ ಕವಿತೆಗಳಲ್ಲಿ ಬಹಳ ಮಾಡಿ ಹೆಣ್ಣನ್ನು ದೂರುವುದೇ ಹೆಚ್ಚು. ಹೆಣ್ಣಿನ ಅಸ್ಥಿರತೆ, ಅವಿಶ್ವಾಸ, ಪಾಪಬುದ್ಧಿ ಮುಂತಾದುವುಗಳನ್ನು ದೊಡ್ಡದುಮಾಡಿ ಗಂಡಸಿನ ಎಲ್ಲ ಅನರ್ಥಕ್ಕೂ ಆಕೆಯೇ ಕಾರಣ ಎಂದು ವರ್ಣಿಸುವುದು ವಾಡಿಕೆ. ಅಮರು ಈ ವಾಡಿಕೆಯ ಜಾಡು ಬಿಟ್ಟು ಬೇರೊಂದು ದಾರಿ ಹಿಡಿದಿದ್ದಾನೆ. ಇದು ಗಮನಾರ್ಹವಾದದ್ದು. ಈ ಕವಿಗೆ ಹೆಣ್ಣು ಗಂಡಿಗಿಂತ ದೊಡ್ಡ ವಸ್ತು. ಗಂಡಸಿನ ನಾನಾ ಅನ್ಯಾಯವೂ ಅಧರ್ಮವೂ ಆದ ವರ್ತನೆಗಳ ಪರಿಣಾಮವಾಗಿಯೇ ಹೆಣ್ಣು ನವೆಯುತ್ತಾಳೆ. ಆಕೆ ಸುಮಕೋಮಲೆ, ಸ್ವಭಾವತಃ ಭೀರು. ಅವಳನ್ನು ಸರಿಯಾಗಿ ನೋಡಿಕೊಳ್ಳುವುದು ಗಂಡಸಿನ ಕರ್ತವ್ಯ ಎಂಬ ಒಂದು ಭಾವನೆ ಬಲಿಯುತ್ತದೆ ಈ ಕೃತಿಯನ್ನು ಓದಿದವರ ಮನಸ್ಸಿನಲ್ಲಿ.

ಹಿಂದೆ ಪ್ರಣಯ ಕೋಪದ ವೃತ್ತಾಂತ ಸಾಕಷ್ಟು ದೀರ್ಘವಾಗಿ ಬಂದಿದೆ. ಚಂಚಲ ಮನಸ್ಕರೂ ಕಠಿಣಹೃದಯರೂ ಆದ ನಾಯಕರ ದೆಸೆಯಿಂದ ತಮಗೆ ತೊಂದರೆಯಾಗದಿರಲಿ ಎಂದು ಸ್ವಸಂರಕ್ಷಣಾರ್ಥವಾಗಿ ಹೊರಹೊಮ್ಮಿದ,

ಅಬಲಾ ಜನದ ವಾಸನಾಸಂಸ್ಕಾರಜನ್ಯವೂ ಸ್ವಯಂ ಪ್ರೇರಿತವೂ ಆದ ಒಂದು ಸಹಜಪ್ರವೃತ್ತಿಯ ರೂಪ ಈ ಕೋಪ ಎಂಬ ರೀತಿಯಲ್ಲಿಯೆ ನಾವು ಪ್ರಕೃತ ದಲ್ಲಿ ಅರ್ಥೈಸಬೇಕು ಎಂಬ ಸಂಗತಿಯನ್ನು ಒತ್ತಿ ಹೇಳುವ ಸಲುವಾಗಿ ಇಲ್ಲಿ ಮತ್ತೊಮ್ಮೆ ಪ್ರಣಯಕೋಪದ ವೃತ್ತಾಂತವನ್ನು ನೆನೆದಿದ್ದೇನೆ. ಅಮರುವಿನ ಪ್ರಣಯ ನಿರೂಪಣೆಯ ವೈಶಿಷ್ಟ್ಯಗಳಲ್ಲಿ ಈ 'ಮನ್ಯುಧಾರಣ'ದ ವೃತ್ತಾಂತವೂ ಒಂದು.

'ಎರಡು ಜೀವಗಳು ಕೂಡಿ ಬಾಳುವುದು ಎನ್ನುವುದು ಸಣ್ಣ ಮಾತೆ ?' ಎಂದು ಅಮರು ಕೇಳುತ್ತಾನೆ. ನಿಜವಾದ ಪ್ರೇಮ ಸಿದ್ಧಿಸುವುದಕ್ಕೆ ಸಹಸ್ರ ವಿಘ್ನಗಳುಂಟು. ಚಿತ್ರದ ಮೇಲೆ ಚಿತ್ರಗಳನ್ನು ಬಿಡಿಸಿ ಅಮರು ನಿಜವಾದ ಒಲುಮೆ ಎಂದೂ ಸುಗಮವಾಗಿ ಹರಿದದ್ದಿಲ್ಲ' ಎಂಬ ತತ್ವವನ್ನು ಸಾರಿದ್ದಾನೆ. ಪ್ರೇಮನದಿ ದಡ ತುಂಬಿ ಹರಿದುಬರುವ ಜೀವನದಿಯಾಗುವುದು ಎನ್ನುವಷ್ಟ ರಲ್ಲಿಯೆ ಅವಜ್ಞೆಯ, ಅನಾದರದ, ಮರಳುಕಾಡಿನಲ್ಲಿ ಇಂಗಿಹೋಗುತ್ತದೆ. ಈ ಅಂಶವನ್ನು ಈತನ ಪ್ರಣಯ ನಿರೂಪಣೆಯ ಮತ್ತೊಂದು ವಿಶೇಷ ಎನ್ನಬಹುದು.

ಚಂಚಲ ಮನಸ್ಕನಾದ ಗಂಡಸಿನ ಚಪಲ ಪ್ರೇಮದ ಎದುರಿನಲ್ಲಿ ಸ್ಥಿರವೂ ನಿಷ್ಠಾಪೂರ್ಣವೂ ಆದ ಹೆಂಗಸಿನ ಪ್ರೇಮವನ್ನು ಚಿತ್ರಿಸಿದ್ದಾನೆ. ಹೆಂಗಸು ತನ್ನ ಸ್ಥಿರತೆ ನೈಷ್ಠಿಕತೆಗಳ ಪರಿಣಾಮವಾಗಿಯೇ ಹೇಗೆ ಚಿರ ದುಃಖಿನಿಯಾಗಿ ಬಾಳಬೇಕಾಗುತ್ತದೆ ಎಂಬ ಅಂಶವನ್ನು ಬಹಳ ಮಾರ್ಮಿಕವಾಗಿ ತಿಳಿಸಿದ್ದಾನೆ. ಈ ಹೆಣ್ಣಿನ ಕಣ್ಣೀರಿನ, ನಿಟ್ಟುಸಿರಿನ, ಭಗ್ನಪ್ರಣಯದ ದಾರುಣವೃತ್ತಾಂತದ ನಿರೂಪಣೆ ಈತನ ಪ್ರೇಮಗೀತಗಳ ಮಗದೊಂದು ವೈಶಿಷ್ಟ್ಯ.

೧೧

ಅಮರು ರಸಿಕವಿದ್ವಜ್ಜನರ ಪ್ರೀತ್ಯಾದರಗಳಿಗೆ ಪಾತ್ರನಾದ ಬಹು ದೊಡ್ಡ ಸತ್ಕವಿ. ಹಿಂದೆ ಒಂದು ಕಾಲದಲ್ಲಿ ಶ್ರೀಮಂತರಾದ ಜನ ಮನೆಗೆ ದಯ ಮಾಡಿಸಿದ ಅತಿಥಿಗಳನ್ನು ಅಮರುವಿನ ಒಂದೆರಡು ಶ್ಲೋಕಗಳ ಅಭಿನಯ ಪೂರ್ವಕವಾದ ಭಾವಪ್ರದರ್ಶನದ ನೃತ್ಯೋತ್ಸವಗಳ ಮೂಲಕ ಗೌರವಿಸಿ ಕಳುಹಿಸಿಕೊಡುತ್ತಿದ್ದರೆಂದು ತಿಳಿದವರು ಹೇಳುತ್ತಾರೆ.

ಸ್ವತಂತ್ರಭಾರತವರ್ಷದ ಜನ ತಮ್ಮ ಹಿಂದಿನ ಸಂಸ್ಕೃತಿಯನ್ನು ಮರಳಿ ಬೆಳಗಬೇಕೆಂದು ಉದ್ದೇಶಿಸಿರುವ ಈಗಿನ ದಿನಗಳಲ್ಲಿ ನಿರ್ದುಷ್ಟವಾದ "ರುಚಿ"ಯನ್ನು ಈ ಅಮರುಶತಕದ ಅವಲೋಕನದಿಂದ ಪಡೆದು ತಮ್ಮ ರಸಿಕತೆಯನ್ನು ಹೆಚ್ಚಿಸಿಕೊಳ್ಳಬಹುದು. ಈ ಇಪ್ಪತ್ತನೆಯ ಶತಮಾನದ "ನಾಗರಿಕ" ರುಚಿಗೂ ಅಮರು ಪ್ರಿಯನಾಗಬಲ್ಲನು. ಅಂತಹ ನಿತ್ಯ ಸತ್ವ ಅವನ ಕೃತಿಯಲ್ಲಿದೆ. ನಮ್ಮ ಜನಕ್ಕೆ ಆತನ ಕೃತಿ ಪ್ರಿಯವಾಗುತ್ತದೆ ಎಂದು ನಂಬಿದ್ದೇನೆ.

೧೨

ಮೂಲಕೃತಿಯ ಸೊಗಸು ನನ್ನ ಅನುವಾದದಲ್ಲಿ ಬರುವುದು ಸಾಧ್ಯವಿಲ್ಲ. ಭಾಷೆಯ ಕೋಟೆಯನ್ನು ಒಡೆದು ಒಳನುಗ್ಗಿ ಬರುವ ಭಾಷಾಂತರಕಾರನ ಧಾಳಿಗೆ ದೊಡ್ಡ ಕಾವ್ಯ ಸತ್ವಗುಂದುವುದಿಲ್ಲವಂತೆ! ಎಂತಹ ಒರಟು ಧಾಳಿಯನ್ನಾದರೂ ಎದುರಿಸಿ ಬದುಕುವುದಂತೆ! ಆ ಧೈರ್ಯದಿಂದ ಈ ಕೆಲಸವನ್ನು ನಾನು ಮಾಡಿ ಮುಗಿಸಿದ್ದೇನೆ. ಕನ್ನಡ ಜನ ಈ ಅನುವಾದದಿಂದ ಅಮರು ಶತಕವನ್ನು ಒಲಿದರೆ ನನ್ನ ಶ್ರಮ ಸಾರ್ಥಕವಾಯಿತೆಂದು ಭಾವಿಸುತ್ತೇನೆ.

ಈ ಪ್ರಸ್ತಾವನೆಯಲ್ಲಿ ಅಮರುವನ್ನು ಕುರಿತು ಹೇಳುವ ಎಲ್ಲ ಮಾತನ್ನೂ ಹೇಳಿಬಿಡಲು ಸಾಧ್ಯವಾಗಿಲ್ಲ. ಅದು ನನ್ನಂತಹವನಿಂದ ಸಾಧ್ಯವೂ ಅಲ್ಲ. ಹತ್ತು ಪುಸ್ತಕ ಓದಿ ಹತ್ತು ಜನರನ್ನು ಕೇಳಿ ನಾನು ಗ್ರಹಿಸಿದ್ದರಲ್ಲಿ ಕೆಲವನ್ನು ಇಲ್ಲಿ ಹೇಳಿದ್ದೇನೆ. ಹೆಚ್ಚಿನ ವಿವರವನ್ನು ಅಪೇಕ್ಷಿಸುವವರು ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರಿಗಳವರಿಂದ ರಚಿತವಾಗಿರುವ 'ಅಮರುಕವಿಯ ಅಮರುಶತಕಮ್' ಎಂಬ ಗ್ರಂಥವನ್ನೂ ಆ ಗ್ರಂಥಕ್ಕೆ ಶ್ರೀ ಎಚ್. ಎಂ. ಶಂಕರನಾರಾಯಣರಾಯರು ಬರೆದಿರುವ ವಿಚಾರಾತ್ಮಕವಾದ ಪ್ರಸ್ತಾವನೆಯನ್ನೂ ನೋಡಬೇಕು ಎಂದು ಕೇಳಿಕೊಳ್ಳುತ್ತೇನೆ. ವಾಚಕರು ನನ್ನ ಇತರ ಕೃತಿಗಳನ್ನು ಪ್ರೀತಿಯಿಂದ ಬರಮಾಡಿಕೊಂಡಂತೆ ಈ ಕೃತಿಯನ್ನೂ ಬರಮಾಡಿಕೊಳ್ಳುವರೆಂದು ನಂಬಿದ್ದೇನೆ.

"ಗರ್ವಮೆ ದೋಷಂ, ಅಱಿಪಿಗಂ ಮೋಷಮೆ!"

೧೩

ಈ ಪುಸ್ತಕದ ರಕ್ಷಾಕವಚದ ಮೇಲೆ ಅಚ್ಚುಮಾಡಿರುವ ಚಿತ್ರ ಅಮರು ಶತಕದ 'ಕೋಪಾತ್ ಕೋಮಲ ಲೋಲಬಾಹುಲತಿಕಾ . . .' (ಅನುವಾದ: ಮುಳಿದ ದಯಿತೆ ತೊನೆವ ಬಳ್ಳಿದೋಳ . . . .) ಎಂಬ ಶ್ಲೋಕಕ್ಕೆ ಸಂಬಂಧ ಪಟ್ಟದ್ದು. ಸುಮಾರು ಕ್ರಿ. ಶ. ಹದಿನೇಳನೆಯ ಶತಮಾನದಲ್ಲಿದ್ದವನೆಂದು ಹೇಳಲಾಗಿರುವ ಪ್ರತಿಭಾವಂತನಾದ ಕಲಾವಿದನೊಬ್ಬನು ಅಮರುವಿನ ಒಂದೊಂದು ಶ್ಲೋಕಕ್ಕೂ ಇಂತಹ ಒಂದೊಂದು ಸುಂದರವಾದ ಚಿತ್ರವನ್ನು ಬರೆದಿದ್ದಾನೆ. ಆ ಕಲಾವಿದನ ಚಿತ್ರಗಳಲ್ಲಿ ಸುಮಾರು ತೊಂಬತ್ತೈದು ಚಿತ್ರ ಗಳನ್ನು ಬೊಂಬಾಯಿ ಪ್ರಿನ್ಸ್ ಆಫ್ ವೇಲ್ಸ್ ಮ್ಯೂಸಿಯಮ್ಮಿನಲ್ಲಿ ಆಕರ್ಷಣೀಯವಾದ ರೀತಿಯಲ್ಲಿ ಪ್ರದರ್ಶಿಸಿದ್ದಾರೆ. ಇಲ್ಲಿ ಆ ಚಿತ್ರಗಳಲ್ಲಿ ಒಂದನ್ನು ತರಿಸಿಕೊಂಡು ಈ ಪುಸ್ತಕದ ಅಳತೆಗೆ ಹೊಂದುವಂತಹ ಚಿತ್ರದ ಪಡಿಯಚ್ಚನ್ನು ಮಾಡಿಕೊಂಡು ಉಪಯೋಗಿಸಿಕೊಳ್ಳಲು ನಮಗೆ ಕೃಪೆಯಿಟ್ಟು ಅನುಮತಿ ಕೊಟ್ಟಿರುವುದಕ್ಕಾಗಿ ಬೊಂಬಾಯಿ ಪ್ರಿನ್ಸ್ ಆಫ್ ವೇಲ್ಸ್ ಮ್ಯೂಸಿಯಮ್ಮಿನ ಡೈರೆಕ್ಟರವರಿಗೆ ತುಂಬ ಋಣಿಯಾಗಿದ್ದೇನೆ. ಈ ಈ ಸಂದರ್ಭದಲ್ಲಿ ಡೈರೆಕ್ಟರ್ ಸಾಹೇಬರವರ ಉಪಕಾರವನ್ನು ಕೃತಜ್ಞತೆ ಯಿಂದ ಸ್ಮರಿಸುತ್ತೇನೆ.

ಶಿಲ್ಪಿ ಶ್ರೀ. ನಾರಾಯಣಸಂಗನು ಅವರ 'ಪ್ರಣಯಿಗಳು' ಎಂಬ ಚಿತ್ರದ ಪಡಿಯಚ್ಚನ್ನು ದೊರಕಿಸಿಕೊಟ್ಟು ಉಪಕಾರಮಾಡಿರುವ ನನ್ನ ಮಾನ್ಯ ಮಿತ್ರ ರಾದ ಶ್ರೀ. ಅ. ನ. ಕೃಷ್ಣರಾಯರನ್ನು ಹೃತ್ಪೂರ್ವಕವಾಗಿ ವಂದಿಸುತ್ತೇನೆ.

೧೦–೯–೫೩ ಎಸ್. ವಿ. ಪರಮೇಶ್ವರಭಟ್ಟ
ಮೈಸೂರು

ಅಮರುಕಕವೇರೇಕಃ ಶ್ಲೋಕಃ
ಪ್ರಬಂಧ ಶತಾಯತೇ

—ಸುಭಾಷಿತ

ಅಮರುಕ ಕವಿಯ ಮುಕ್ತಕಗಳು ಶೃಂಗಾರ
ರಸವನ್ನು ಸ್ರವಿಸುತ್ತ ಪ್ರಬಂಧಗಳಂತಿರು
ವುದು ಸುಪ್ರಸಿದ್ಧವಾಗಿಯೇ ಇದೆ.

—ಆನಂದವರ್ಧನ

ಸ್ಮರರಾಜ್ಯದ ಪೈಸಿರಿ ಶೃಂಗಾರದ
ಶರನಿಧಿ ರತಿನಾಟ್ಯದ ರಂಗಸ್ಥಳ
ವಿರಹದ ನೆಲೆವೀಡೋಪರ ಕೂರಾಟದ ಕೊಸರಿನ ಗೊತ್ತು
ಸರಸರ ಸಂತವಣೆಯ ಮನೆ ಸುಗ್ಗಿಯ
ಪೊರೆವಾಗರ ಭಾವಾಲಯ....

—ದೇಪಕವಿ

೧

## ಪ್ರಾರ್ಥನೆ

ಹೆದೆಯನೆಳೆವೆಸಕದೊಳು ಬಿಗಿದ ಖಟಕಾಮುಖದ ಕೈಯ ಹಿಂಬದಿಯ
ಅದುರುತಿಹ ಸೆಳ್ಳುಗುರ ಪೊಗರ ಕದಿರೋಳಿಯೊಡವೆರೆದ ಅಂಬಿಕೆಯ
ಚಿಗುರೆಲೆಯು ಮಂಜರಿಯು ಕಿವಿದೊಡವ ತಾನೆಳಸಿ ಸುಳಿಸುಳಿಯುವಳಿಯ
ಸೂಗುರಿಯು ತಳೆದೆಸೆವ ಕುಡಿನೋಟ ಕಾಪಿಡಲಿ ನಿನ್ನ ತಾನೊಲಿದು.

೨

## ಪ್ರಾರ್ಥನೆ

ಕೈ ಬಿಡದೆ ಹಿಡಿದರೂ ಒದರಿ ತಳ್ಳಿಸಿಕೊಳುವ
ತುದಿ ಸೆರಗನಾಂತರೂ ಕಡು ಹೊಯ್ಸಿಕೊಳುವ
ಕುರುಳನೇವರಿಸಿದರು ಮತ್ತೆ ನೂಕಿಸಿಕೊಳುವ
ಕಾಲಬಳಿ ಬಿದ್ದರೂ ಕಡೆಗಣಿಸಿಕೊಳುವ
ಸಡಗರದೊಳಪ್ಪಿದರು ಬಿಡದೆ ಕೊಡಹಿಸಿಕೊಳುವ
ಹೊಸ ತಪ್ಪನೆಸಗಿರುವ ಕಾಮಿವೊಲು ಬರುವ
ನೈದಿಲೆಯ ಕಣ್ಣಳಲಿ ನೀರು ಸಲೆ ತುಂಬಿರುವ
ಮುಪ್ಪೊಳಲಿನಂಗನೆಯರಂದು ಕಂಡಿರುವ
ಶಂಭುವಿನ ಕಣೆ ಬೆಂಕಿ ಸುಡಲಿ ದುರಿತವನು.

೩

## ವಾಸವ ಸಜ್ಜಿಕೆ

ಹೊಳೆಹೊಳೆಯುವ ತಾರಹಾರವಿದನು ಉರದೊಳಿರಿಸುತೆ
ಘಲಿರು ಘಲಿರು ಕಾಂಚಿಯು ಘನಜಘನದೆಡೆಯೊಳಿರಿಸುತೆ
ಝುಣಿರು ಝುಣಿರು ನೇವುರವನು ಪಾದಗಳಲಿ ಧರಿಸುತೆ
ಪ್ರಿಯನನರಸಲಿಂತು ನಡೆದು ಡಿಂಡಿಮವನು ಬಡಿಯುತೆ
ದಿಕ್ಕನೇಕೆ ನೋಡುತಿರುವೆ ಮುಗ್ಧೆ ಬೆಚ್ಚಿ ನಡುಗುತೆ !

೪

## ಅಭಿಸಾರಿಕೆ

"ಹೊರಟಿರುವೆ ಕರಭೋರು ಘನ ನಿಶಿಯೊಳೆತ್ತ ?"
"ನನ್ನ ಪ್ರಾಣಾಧಿಕನು ನಲ್ಲನಿರುವತ್ತ."
"ಬೆದರೆಯೆಲೆ ಬಾಲೆಯೆಂತೇಕಾಕಿ ನೀನು ?"
"ಗರಿಯಂಬಿನೀ ಮದನ ಜೊತೆಗಿಲ್ಲವೇನು !"

೫

## ಮುಗ್ಧೆ

ಮೆಲ್ಲನೆ ಹೊರಳುತ ಒಲವೊಳು ಕರಗುತ
ಮರಳಿ ಮರಳಿ ಮುಗುಳಾಗುತ್ತ
ಕ್ಷಣವೆದುರಾಗುತ ನಾಣೊಳು ಬಳುಕುತ
ಎವೆ ಮುಚ್ಚುವುದನೆ ಮರೆಯುತ್ತ
ಹೃದಯದೊಳಡಗಿದ ಭಾವದ ಬಯಕೆಯ
ಕಾರುವ ತೆರದೊಳು ತೋರುತ್ತ
ಸುಕೃತಿ ಆದಾರನು ನೀನಿಂದೀಪರಿ
ನೋಡುವೆ ದೃಷ್ಟಿಸಿ ನುಡಿ ಮುಗ್ಧೆ !

೬

## ಯೋಷಿತೆ

ಆಕೆ ಹೆಂಗಸು ನಾವೆ ಕಾತರರಾಕೆ ಬಾಲಕಿ ನಾವೆ ಚಂಚಲ ಚಿತ್ತರು
ಆಕೆ ಪೀನ ಪಯೋಧರದ್ವಯಭಾರವಾಂತರು ನಾವೆ ಖೇದಾವಿಷ್ಟರು
ಆಕೆ ಗುರುತರ ಜಘನಭಾರಾಕ್ರಾಂತಳಾದರು ನಾವೆ ನಡೆಯಲಶಕ್ತರು
ಹೆರರೊಳೊಗೆದಿಹ ದೋಷದಿಂದಸಮರ್ಥರಾದೆವು ನಾವಿದದ್ಭುತವು !

೭

## ಬಾಲಭಾಷಿಣಿ

ಮೊದಲ ಯಾಮದ ಕಡೆಯೊಳೋ ಮೇಣಿಂದು ಮಧ್ಯಾಹ್ನದೊಳೊ
ಮೇಣೀ ಹಗಲ ಮುಂದಣದೊಂದು ಯಾಮದೊಳೊ
ಅಲ್ಲದಿರಲಿನ್ನದರ ಮುಂದಣ ಯಾಮದೊಳೊ ಮೇ
ಣಿಂದಿನೀ ಹಗಲೆಲ್ಲವೂ ಕೊನೆಗೊಂಡವೇಳೆಯೊಳೊ
ಇನಿಯ ನೀನೈತರುವುದಿಲ್ಲಿಗದೆಂದಿಗೆಂದಾ
ನೂರು ದಿನಗಳು ಹಿಡಿವ ದೇಶಕೆ ಹೋಗುವಾತನನು
ತಡೆದಳಾ ಪಯಣವನು ಬಾಲಿಕೆ ಕಣ್ಣ ನೀರನು
ಸುರಿಸುತಾಡಿದ ತನ್ನ ಬಾಲಾಲಾಪದಿಂದವಳು.

೮

## ದೀನೆ

ಸೆರಗಿನಿಂದ ಬಳ್ಳಿದೋಳ ಬಿಗಿಯಲಿಲ್ಲ
ಬಾಗಿಲೆದುರು ನಿಲ್ಲಲಿಲ್ಲ
ಕಾಲಮೇಲೆ ಮತ್ತೆ ಮತ್ತೆ ಬೀಳಲಿಲ್ಲ
ನಿಲ್ಲು ಎಂದು ಹೇಳಲಿಲ್ಲ
ಮುಗಿಲಿನಿಂದ ಮಲಿನಗೊಂಡ ಮಳೆಯ ದಿನಮೊ
ಳಿಂದು ಶಠನು ತೆರಳುತಿರಲು
ಕಣ್ಣನೀರ ಸರಿಯ ತೊರೆಯ ನೆರೆಯದೊಂದ
ರಿಂದಲಸಿಯಳವನನಿರದೆ ತಡೆವಳು.

೯

## ಖಿನ್ನೆ

ಅಂತು ಚಿಂತಾ ಮೋಹನಿಶ್ಚಲ ಮೌನಮುನದಿಂ
ದವಳ ಪಾದಾನತನು ತಾನಾದಾತನು
ತೆರಳಲನುವಾದಂದು ಪ್ರಿಯತಮನವಳ ಧಿಕ್ಕಾ
ರದೊಳು ನೊಂದವನುರು ಪರಾಙ್ಮುಖನು ;
ಸಂತತವು ಕವಿದಿಳಿದ ಬಾಷ್ಪದೊಳಾಕುಲಂಗೊಳು
ತಿರುವ ವ್ರೀಡಾಲಸದ ನೋಟದೊಳು
ತನ್ನ ಶ್ವಾಸೋತ್ಕಂಪಿ ಕುಚವನು ನೋಡಿ ನೀಡುಂ
ತಡೆದಳವನನು ಜೀವದಾಶೆಯೊಳು.

೧೦

## ವಿಪ್ರವಾಸ ದುಃಖಾರ್ತೆ

"ತೆರಳಿದವರು ಮರಳಿ ಸೇರದಿರುವರೇನು ಚೆನ್ನೆ ಹೇ !
ನನ್ನ ಕುರಿತು ಚಿಂತಿಸದಿರು ನೀನು ಬಹಳ ಸೊರಗಿಹೆ."
ಹೇಳಲವಳಿಗಿಂತು ನಾನು ಕಣ್ಣ ನೀರು ತುಂಬುತೆ;
ನಾಚಿಕೆಯಲಿ ಮೆಲ್ಲ ಮೆಲ್ಲನಾಲಿಗಳನು ತಿರುಹುತೆ
ಸುರಿವ ಕಂಬನಿಯನು ತಡೆದು ಹೆರವುಗಣ್ಣೊಳೆನ್ನನು
ನೋಡಿ ತಾನು ಸೂಚಿಸಿದಳು ಮುಂದಣವಳ ಸಾವನು.

೧೧

## ಪ್ರಸ್ಥಾನ ದುಃಖಾಕ್ರಾಂತೆ

ನಿಡಿದು ನೋಡಿದಳವಳು ಕಾತರಗೊಂಡ ಕಣ್ಣೊಳು
ಬೊಗಸೆಗೈಗಳನೊಡ್ಡಿ ಬೇಡಿದಳು
ಹಿಡಿದುಕೊಂಡಳು ಬಳಿಕ ವಲ್ಲಿಯು ಸೆರಗನಾಬಳಿ
ಕಿರಥೆ ನಲ್ಲನ ಕೆಮ್ಮನಪ್ಪಿದಳು
ಇಂತಿದೆಲ್ಲವ ತೊರೆದು ನಿರ್ದಯು ಶಠನು ತಾನಿರ
ದೈದಲನುವಾದಂದು ಆ ದಯಿತೆ
ಮೊದಲು ಬಿಟ್ಟಳು ಜೀವದಾಸೆಯು ಬಳಿಕ ಬಿಟ್ಟಳು
ಹಿಡಿದ ನಲ್ಲನ ಕೈಯ ತಾನಂತೆ.

೧೨

## ಕೃತಾರ್ಥೆ

ಕಂಬನಿಯನು ಮಿಡಿದು ಮಿಡಿದು ಆಣೆಭಾಷೆಗಳನು
ನುಡಿದು ಬೇರೆಯುವರು ಕೃಪಣರು
ಮುದ್ದು ಮಾತುಗಳನು ಆಡಿ ಪಯಣಗೈಯಲಿರುವ
ಪ್ರಾಣಕಾಂತನನ್ನು ತಡೆವರು.
ಪ್ರಿಯನೆ ಪೊತ್ತರೆಯೊಳು ಪಯಣಗೈವ ನಿನಗೆ ಸುದಿನ
ವಕ್ಕೆ ಪುಣ್ಯ ಶುಭಗಳಾಗಲಿ
ತೆರಳು ನೀನು ಒಲವಿಗುಚಿತವಾವುದದನೆ ನಾನು
ಗೈದೆನೆಂದು ಮುಂದೆ ಕೇಳುವೆ.

೧೩

## ವಿರಹಾರ್ತೆ

ಹೋಗಿ ಬರುವೆನೆಂದು ತೆರಳಲಿರುವ ನಲ್ಲನೆಂದ
ನುಡಿಯು ಶಾಂತಳಾಗಿ ಕೇಳಿದೆ
ದೂರ ಹೋಗುತಿದ್ದ ನಲ್ಲನೆನಿತೊ ತಿರುಗಿ
ನಿಂತರೂ ಉಪೇಕ್ಷೆ ಮಾಡಿದೆ
ಅವನು ತೊರೆದ ಮನೆಯೊಳಹೆನು ನನ್ನ ಜೀವವಿಂತು
ಗಟ್ಟಿಯಾಗಿ ಉಳಿದು ನಿಂತಿದೆ
ಜೀವದಾಸೆ ಇರುವ ನಾನೊ ದಂಭಕಾಗಿ ಅಳುವೆ
ಸುಮ್ಮನಿರುವುದೋವೊ ಸಖಿಯರೆ !

೧೪

## ಉತ್ಪಾತ ವಿಷಾದೆ

ಪಯಣಗೈದವು ಬಳೆಗಳೆಡವಿಡದುದುರಿದವು ಕಂ
ಬನಿಗಳೊಲುಮೆಯ ಸಖಿಯರು
ಕ್ಷಣವುಮಿರದಿಹುದಿಂದು ಧೃತಿಯು, ಮುಂದೆ ನಡೆಯಲು
ಮನವು ನಿಶ್ಚಯಿಸಿರುವುದು
ಇಂತು ನಿಶ್ಚಿತ ಮನನು ನಲ್ಲನು ತೆರಳುವಂದವ
ನೊಡನೆ ಹೊರಟಿಹರೆಲ್ಲರು
ತೆರಳಬೇಕಾಗಿರುವ ಜೀವವೇ ! ಒಲುಮೆಗೆಳೆಯರ
ಗುಂಪನೇತಕೆ ತೊರೆಯುವೆ !

೧೫

## ಗತ ಭರ್ತಾರಿಕೆ

ಕಣ್ಣು ಹರಿಯುವತನಕ ನಲ್ಲನ ಹಾದಿಯನು ತಾ
ನೋಡಿ ಖೇದವನಾನುತೆ
ಹಗಲು ಮುಗಿಯಲು ಜನದ ಸುಳಿವಳಿದಿರುವ ದಾರಿಯ
ಕವಿದು ಹಬ್ಬಲು ಕತ್ತಲೆ
ಮನೆಯ ಕಡೆಗೆಂದೊಂದು ಹೆಜ್ಜೆಯ ದುಗುಡದಿಂದಿಡು
ತೊಡನೆ ಕತ್ತನು ತಿರುಹುತೆ
ಮರಳಿ ಬಂದಿರಲಾರನೇನೀ ಕ್ಷಣದೊಳೆನ್ನುತೆ ನೋಡು
ತಿದ್ದಳು ಪಥಿಕ ಜನವನಿತೆ.

೧೬

## ವಿರಹೋತ್ಕಂಠಿತೆ

ಮಲಯ ಮಂದಾನಿಲನು ಸಂದನು. ಬಿರಿದ ಮಲ್ಲಿಗೆ
ಯಲರುಗಂಪಿನ ಗ್ರೀಷ್ಮನೈದಿದನು.
ಘನನೆ ! ನಿಃಸ್ನೇಹಿಯನು ಘಟಯಿಸಲಿಂದು ಕೇಳು
ತ್ಸಾಹಿಯಾದೊಡೆ ಮುಂದೆ ನಡೆ ನೀನು.
ಯಾರು ದನವನು ಮರಳಿ ತರುವನೊ ಅವನೆ ಪಾರ್ಥನು
ನನಗೆ ಆದರಿಂದಹುದು ಕುಂದೇನು !

೧೭

## ಪ್ರವಾಸಿ

ನಡುವೆ ಬೇರ್ಪಡಿಸಿಹವು ನೂರಾರೂರುಗಳು ಆ
ಬೆಟ್ಟ ಹೊಳೆ ಕಾಡುಗಳು ತನ್ನಿಂದವಳನು
ಎನಿತು ಯತ್ನಿಸಿ ನಿಲುಕಿ ದಣಿದರು ತನ್ನ ಕಂಗಳಿ
ಗಿನಿಯೆ ಕಾಣಿಸಳೆನುವುದನು ತಾ ಬಲ್ಲನು.
ಆದರೂ ಕೊರಳೆತ್ತಿ ನೆಲವನು ತನ್ನ ಮೆಟ್ಟುಂ
ಗಾಲೊಳೊತ್ತುತೆ ಕಂಬನಿಯನಿರದೊರಸುತೆ
ಮತ್ತೆ ಆ ದಿಕ್ಕನ್ನೆ ದಿಟ್ಟಿಸುತಂತೆ ನಿಲುವನು
ಪಥಿಕ ತಾನಿನ್ನೇನನೋ ನೆನೆನೆನೆಯುತೆ !

೧೮

## ವಿರಹಿ

ಕೇಳಿ ನಿಶಿಯೊಳು ನೀರನೆರಚುವ
ಮೋಡದೋಳಿಯ ಮೊಳಗಿನೊಂದುಲಿಯ
ನೀಳವಾದುಸಿರೆಳೆದು ಪಥಿಕನು
ತುಂಬಿ ಕಂಬನಿ ಬಾಲೆ ವಿರಹಿಣಿಯ
ನೆನೆದು ನೀಡುಂ ರಾತ್ರಿಯೆಲ್ಲಾ
ಬಾಯಿಬಿಟ್ಟಳುತಿದ್ದನೂರಿನೊಳು
ಊರ ಜನರಾ ಊರಿನಿಂದಾ-
ತನನು ಹೊರಗಿರದಟ್ಟುವಂದದೊಳು.

## ೧೯

## ವಿಪ್ರವಾಸಿ

ರಾತ್ರಿ ವಾರಿಭರಾಲಸಾಂಬುದ ರವದೊಳುದ್ವಿಗ್ನತೆಯನಾಂತಾ ಪಾಂಥನು
ಅಳುತಲೌತ್ಸುಕ್ಯದೊಳು ಹಾಡಿದನಾತ್ಮವಿರಹವ್ಯಥೆಯ ಸೂಚಿಪ ಹಾಡನು
ಜೀವ ತೆಗೆಯುವ ಪ್ರವಸನಾಲಾಪನೆಯ ಸಂಕೀರ್ತನೆಯದಿರಲಂತೆ
ಭರದೊಳಿತ್ತುದೊ ಲೋಕವುನಿಸಿಗುವಿಂದು ಸಲಿಲಾಂಜಲಿಯನೆನುವಂತೆ!

## ೨೦

## ತನ್ವಂಗಿ

ಅಂದು ತನ್ನಾ ಹಿರಿಯರೆದುರೊಳು ಕಂಬನಿಯನೊಳ
ಗೊಳಗೆ ತಡೆದಿರಲದರ ನೀರಿನೊಳು
ಇನಿಯನಗಲಿಕೆಯಿಂದಲುರಿಯುವನಂಗ ಶಿಖಿಯನು
ನಂದಿಸಿದಳಾ ಅಸಿಯಳಂದದನು
ಉಸಿರು ಬಿಡುವಾಯಾಸದಿಂದಿದೊ ಚೆದುರಿ ಹಾರುವ
ಅಳಿಯ ಮಾಲೆಯ ಹೋಲುವಂದದೊಳು
ಆಗಲಾರಿದ ಬೆಂಕಿಯುರಿಯಾ ಹೊಗೆಯ ಸುರುಳಿಯಿ
ದಿಂತು ಮೊಗದಿಂದೊಗೆಯಿತೆಂದಿಹೆನು.

೨೧

## ಪ್ರೋಷಿತ ಭರ್ತೃಕೆ

ಸುತ್ತ ಹರಹಿದ ಹೂವು ಹುಡಿಯನು ಕುಡಿಯಲಾಶಿಸಿ
ಮೊರೆವ ಪೆಣ್ದುಂಬಿಗಳ ತಳೆದೆಸೆದು
ನಲಿವ ನಮ್ಮಂಗಳದ ಬಾವಿಯು ಬಳಿಯ ಮಾವಿನ
ಮರೆದ ಮಂಜರಿಯೊಂದ ತಾ ಹಿಡಿದು
ನೆನೆವೆನವಳನು—ಜೊದೆದ ವಲ್ಲಿಯು ಸೆರಗಿನಿಂದಾ
ಬಾಲೆ ಮೊಗವನು ಮುಚ್ಚಿಕೊಳುತಂದು
ಹೊಳೆವ ಕೊರಳಿನ ದನಿಯು ಕುಗ್ಗಿಸಿ ಕುಚವ ಕುಣಿಸುತ
ಲುಸಿರನೆಳೆದೆಳೆದಳುತಲಿಹಳೆಂದು.

೨೨

## ವಿರಹಿ

ನನ್ನ ನಿಡಿದಗಲಿಕೆಯ ಬೆಂಕಿಯೊಳುರಿದು ಸಲೆ ಬೆಂದು
ಬೆಳ್ಳಗಾಗಿರುವಿನಿಯಳೆದೆಯೊಳು ಕಣ್ಣ ಹನಿ ಬಿಂದು
ದಾರಿಯೊಳೆ ನೆಟ್ಟಿರುವ ಕುಗ್ಗಿದ ನೋಟದಿಂದಿಳಿದು
ಜೊಯ್ಯ ಜೊಯ್ಯನೆ ಬೀಳುತಿಹವೆಂದೂಹಿಸುವೆ ನಿಂದು.

೨೩

## ಉಲ್ಲಾಸಿನಿ

ನೀಳವೊಲೆಯ ನೋಟದೊಳ್ ತಾನೆಸಗಿ ಮಣಿದಳು ತರದೆ ನೈದಿಲೆಯ
ಬೊಗಸೆ ಹೂವಿನ ಸೇಸೆ ತಳಿದಳು ಮೊಳೆವ ನಗೆಯೊಳ್ ತರದೆ ಮಲ್ಲಿಗೆಯ
ಬೆವರು ಸುರಿಯುವ ಮೊಲೆಗಳಿಂದವಳರ್ಘ್ಯವಿತ್ತಳು ತರದೆ ಬಿಂದಿಗೆಯ
ತನ್ನ ಅಂಗಗಳಿಂದ ಮಂಗಳಗೈದಳಿಂತೊಳವುಗಲು ತನ್ನಿನಿಯ.

೨೪

## ಉತ್ಕಂಠಾರ್ತೆ

ಬಹಳ ದಿನದಿಂದಗಲಿದವರತಿ ಕಾತರತೆಯೊಳು
ಸೊರಗಿ ಬಡವಾಗಿರುವ ಮೈಯವರು
ಮತ್ತೆ ಜಗ ಹೊಸದಾಗಿ ಹುಟ್ಟಿತೊ ಎಂಬವೊಲು ಬಹು
ಮೋದದೊಳು ತಾ ಮರಳಿ ನಲಿವವರು
ನೀಳವಾಗಿಹ ಹಗಲದೆಂತೋ ಕಳೆದು ರಾತ್ರಿಯೊ
ಳೊಂದುಗೂಡಿದ ಯುವಕ ಯುವತಿಯರು
ಎಂತು ವೇಳೆಯ ಸರಸದಾಲಾಪದೊಳು ಕಳೆವರೊ
ಅಂತು ಕಳೆಯರು ರತಿಯೊಳಾ ಪ್ರಿಯರು.

೨೫

## ಸುಖಿ

ಕಣ್ಣ ನೋಟದ ಬೇಟದಿಂದೀ ಮನವು ಉಬ್ಬಿರೆ
ಕೆಳೆಯು ಬೆಳೆಯಿಸುವಂಥ ಬಗೆಯನು ನೆನೆದಿರೆ
ಕೆಳದಿಯರ ಸಂಚಾರ ಗೋಚರವಾಗುತಿರೆಯಿರೆ
ಒಲುಮೆಯಿಂಪಿನಲಂಪು ಸೊಂಪನು ತಳೆದಿರೆ
ದೂರವಿರಲಾ ದಯಿತೆಯನು ನಾ ಸೆಳೆದು ಭರದಿಂ
ದಪ್ಪಿಕೊಳ್ಳುವ ಸೊಗದ ಸವಿಸಂಮೋದವು !
ಮನೆಯ ಬಳಿಯಾ ಹಾದಿಯಲೆ ಸಲೆ ಸುಳಿವುದೂ ಸಹ
ಇಂದು ನನ್ನೀ ಹೃದಯಕೆನಿತಾನಂದವು !

೨೬

## ರತಿಕಾತರೆ

ನೂರು ತೆರನ ಮನೋರಥಂಗಳಿನೆಂತೊ ಹಗಲದು
ಕಳೆದು ತಾನೈತಂದ ಬಳಿಕಿನಿಯ
ರಸಿಕಬುದ್ಧಿಯನರಿಯದೆಯೆ ಜಡರಾದ ಪರಿಜನ
ರಿರದೆ ತೊಡಗಿರೆ ಮತ್ತೆ ನಿಡುಗತೆಯ
ಕಚ್ಚಿತೇನೋ ಎಂದು ಹೇಳುತೆ ಒಡನೆ ರೇಸಿಮೆ
ಸೀರೆ ಸೆರಗನು ಕೊಡಹಿ ಹಾರಿಸುತೆ
ದೀಪ ಕಳಿಕೆಯನಸಿಯುಳಿರದಂದಾರಿಸಿದಳಾ
ಮತ್ತ, ನಿಜ ರತಿ ಚಿತ್ತ, ಕಾತರಿತೆ.

೨೭

## ಚುಂಬನ ಸುಖ

ಕಂದಿ ಕುಂದಿದ ಬಿಳಿಚಿಕೊಂಡಿಹ ಲಾಸವಿಲ್ಲದ
ಕವಿದ ಮುಂಗುರುಳಿಳಿದ ಮಂದಾನನವನು
ತೆರಳಿದವನೈತಂದ ಒಡನೆಯೆ ಮರಳಿ ತಾನಾ
ಮಧುರ ಶಾಂತಿಯನಾಂತು ಮೆರೆವಾನನವನು
ಸುರತ ಕೇಲೀ ಕಾಲ ದತ್ತಾನಂದ ರಭಸದ
ಸರಸ ಸಾಟೋಪಾತ್ತ ರಾಗಾನನವನು
ಒರೆವುದೆಂತಾ ಸುತನು ವದನವನಂದು ನಾನೆಳೆ
ದೀಂಟಲಮಿತಾನಂದವಾದಾ ಪರಿಯನು.

೨೮

## ಹತಭಾಗಿನಿ

ಒಲುಮೆ ಬಿಗಿದಿಹ ಕಟ್ಟು ಕಳಚಲು; ಪ್ರೀತಿ ಗೌರವವಿಳಿಯಲು
ನೇರ್ಪು ತೊಲಗಲು ಜನರು ನಡೆದಂತವನು ನನ್ನೊಳು ನಡೆಯಲು
ಇದನು ಪ್ರಿಯಸಖಿ ! ಊಹಿಸೂಹಿಸಿ ಕಳೆದ ದಿನಗಳ ನೆನೆಯುತೆ
ಸೀಳದೇತಕೊ ಅರಿಯೆನೆದೆಯಿದು ನೂರು ತೆರದೊಳು ಬಿರಿಯುತೆ !

## ೨೯

## ಹತಾಶೆ

‘ಕಪ್ಪಿದಲ್ಲವೆ ?’ ‘ಕಪ್ಪು’ ‘ಪ್ರಿಯತಮ !
ಬಿಳುಪಿದಲ್ಲವೆ’ ‘ಅಲ್ಲದಿನ್ನೇನು !’
‘ನಡೆವ ಮುಂದಕೆ’ ‘ಓಹೊ ನಡೆಯುವ’
‘ಸಾಕು ನಡೆದುದು ನಾಥ’ ‘ಸರಿ, ಸಾಕು’
ಆವನಿಂತನುಸರಿಸುತಿದ್ದನು
ಮೊದಲು ಬಹುದಿನವೆನ್ನ ಮನವಿದನು
ಅವನೆ ಹೆರರಂತಾದನೆಲೆ ಸಖಿ !
ಎಂತು ಪುರುಷರೊಳಿಹುದು ಕೆಳೆ ತಾನು !

## ೩೦

## ಮುಗ್ಧೆ

ಹುಬ್ಬು ಗಂಟಿಕ್ಕಿದ್ದರೂ ಈ ದಿಟ್ಟೆ
ಕಟ್ಟಾತುರುವ ತೋರುತಲಿರುವುದು
ಮಾತು ತಡೆಗಟ್ಟಿದ್ದರೂ ಈ ಸುಟ್ಟ ಮೊಗ
ದೊಳು ನಗೆಯು ಮೊಳೆಯುತಲಿರುವುದು.
ಮನಸು ಬೆಟ್ಟಿತ್ತಾದರೂ ಈ ಮೈಯು
ರೋಮಾಂಚನವ ತಾಳುತಲಿರುವುದು
ಸಿಟ್ಟನೀ ನಿರ್ವಾಹವಾತನು ಕಂಡ
ಬಳಿಕಿನ್ನೆಂತು ನಡೆವುದೊ ಅರಿಯದು.

## ೩೧

## ಮುಗ್ಧೆ

ಅವನ ಮೊಗದ ಎದುರು ನಿಂದು ಮೊಗವ ನಾನು ತಗ್ಗಿಸಿದೆನು
ಕಾಲುಗಳಲಿ ನೋಟವಿದನು ನಿಲಿಸಿದೆ
ಇನಿಯನಾಡುವಿನಿದು ನುಡಿಯು ಕೇಳುವೊಂದು ಕೌತುಕದೊಳು!
ಕದಡಿದೆನ್ನ ಕಿವಿಗಳನ್ನು ಮುಚ್ಚಿದೆ
ಕೆನ್ನೆಗಳಲಿ ನಿಮಿರಿ ನಿಂದ ನವಿರಿನೊಡನೆ ಒಗೆದ ಬೆವರನದನು
ಮರದೆ ನನ್ನ ಕೈಗಳಿಂದಲೊರಸಿದೆ
ಕೆಳದಿ ಜನರೆ ಪೆರತನೇನನೆಸಗಲಹುದು ನನ್ನ ಕುಪ್ಪ
ಸದೊಳು ಹೊಲಿಗೆ ನೂರು ಕಡೆಯೊಳೊಡೆಯಿತು.

## ೩೨

## ಸರಳೆ

ಆರ ಹೆಸರನು ಕೇಳಿದೊಡನೆಯೆ ನವಿರು ನಿರಿನಿರಿ
ನಿಮಿರಿ ನಿಲುವುದೊ ಮೈಯೊಳು
ಆರ ವದನೇಂದುವನು ಕಂಡೊಡನಿಂದುಕಾಂತವ
ನನುಸರಿಸುವುದೊ ತನುವಿದು
ಅಂಥ ನನ್ನಾ ಪ್ರಾಣನಾಥನೆ ಬಂದು ಕೊರಳ
ಪ್ಪುಗೆಯ ಸನಿಹದೊಳಿದ್ದರೆ
ವಜ್ರ ಕರ್ಕಶಳಾದರೂ ನಾ ಮಾನಚಿಂತಾ
ಭಗ್ನಳಾದವಳಾಗುವೆ.

## ೩೩

## ರಾಗಿಣಿ

ಬಗೆಯು ಕದಡದೆ ಕುಚವ ಸೋಂಕದೆ ಮೈಯ ಪುಳಕಂಗೊಳಿಸದೆ
ಬೆವರು ಹನಿಯನು ಮೊಗದೆ ಬರಿಸದೆ ಶಠನ ಕಂಡೊಡನೆನ್ನದೆ
ಮಾರು ಹೋದುದು ಕೇಳು ನನ್ನೀ ಮನವನಿನಿಯನು ಕದ್ದನು!
ಧೈರ್ಯಗೆಡಿಸುವ ಪ್ರಾಣನಾಥನ ಬಳಿಯೊಳೆನ್ನೀ ಮುನಿಸನು
ಆವ ನಿಪುಣೋಪಾಯಗಳನೆಸಗುತ್ತಲಿದನಾ ನಿಲಿಪೆನು ?

## ೩೪

## ವಿಲಾಸಿಕೆ

ಕಾಲಿಗೆರಗುವನಳುತಲೊರೆವನು ಮುದ್ದು ಮಾತನು ನುಡಿವನು
ಸೊರಗಿದಂಗವನಪ್ಪಿಕೊಳುವನು ಥಕ್ಕನೀವನು ಮುತ್ತನು
ಇಂತು ಬಹುಫಲ ಮುನಿಸೊಳಾದರು ನಾನು ಹೀನೋತ್ಸಾಹಳು
ಇನಿಯನೆನಿತೋ ಬಗೆಗೆ ಚೆಲುವನು ಮತ್ತೆ ನಾನೇಗೈವೆನು.

೩೫

## ಚಾರುನೇತ್ರೆ

ದೂರದಿಂದೌತ್ಸುಕ್ಯಗೊಳ್ಳುತೆ ಬರಲು ತಿರುಗುತೆ
ಮಾತನಾಡಿಸಲರಳುತೆ
ತಬ್ಬಿಕೊಳ್ಳಲು ಕೆಂಪಗಾಗುತೆ ಬಟ್ಟೆ ಹಿಡಿಯಲು
ಮುಸಿದು ಹುಬ್ಬನು ಬಿಗಿಯುತೆ
ಕಾಲಿಗಿರದೆರಗಿರುವ ಪದದೊಳು ಕಣ್ಣ ನೀರನು
ನೋಟದೊಳು ಸಲೆ ತುಂಬುತೆ
ಕಣ್ಗಳೆಸೆದವು ತಪ್ಪನೆಸಗಿದ ನಲ್ಲನೊಳು ಜಗ
ದಗಲ ಚತುರತೆಯಾನುತೆ.

೩೬

## ಪ್ರಗಲ್ಭೆ

ಬಳ್ಳಿಹುಬ್ಬನು ಕುಣಿಸಿ ತೋರಲು ಸವತಿ ದಿಕ್ಕನು, ತಲೆಯ ಕೊಡಹಿದನು
ಅದರ ವೃತ್ತಾಂತವನು ನೋಡಲು, ನಿಂತನಿನಿಯನು, ಮಾಡಿ ನಮನವನು
ಕೆನ್ನೆ ಕೋಪಕೆ ಕೆಂಪಗಾಗಲು, ಕಾಲೊಳಿಟ್ಟನು ಕಣ್ಣ ನೋಟವನು
ಬಿಡರು ಗುರುಸನ್ನಿಧಿಯೊಳಾದರು ಅವರು ಕಾಲೋಚಿತದ ಕರ್ಮವನು.

## ೩೭

## ಚತುರೆ

ದೂರದಿಂದಲೆ ಎದುರುಗೊಳ್ಳಲು ನಡೆವ ಕತದಿಂ
ದೊಂದೆ ಪಾಸೊಳು ಕುಳಿತುಕೊಳ್ಳುವುದು ತಪ್ಪಿತು
ವೀಳೆಯವ ತರುವೊಂದು ನೆವದೊಳು ಮತ್ತೆ ಬಿಗಿದೆಳೆ
ದಪ್ಪಿಕೊಳುವುದಕಿರದೆ ತಾನೆಡರಾಯಿತು
ಪತಿಯ ಬಳಿಯೊಳು ಪರಿಜನಂಗಳ ಬೆಸಸುತಿರುವಂ
ದೊಡನೆ ನುಡಿಯುತಲಿರುವುದೂ ಸಹ ತಪ್ಪಿತು
ಚತುರೆ ಕೋಪವನಿಂತು ಸಾರ್ಥಕಗೊಳಿಸಿಕೊಂಡಳು
ನಲ್ಲಗುಪಚಾರವನು ಮಾಡುವ ನೆವದೊಳು.

## ೩೮

## ಧೀರೆ

ದೂರದಿಂದಲೆ ಮಂದಹಾಸ ಮನೋಜ್ಞ ಸುಸ್ವಾಗತವ ನೀಡಿರುವೆ
ಮತ್ತೆ ಮಾರುತ್ತರವನೀಯದೆ ನನ್ನ ಆಜ್ಞೆಯ ಶಿರದೊಳಾಂತಿರುವೆ
ಕಠಿನ ಹೃದಯಳೆ ! ಗುಪ್ತಕೋಪದ ಗೋಪನಂಗೈವೊಂದು ರೀತಿಯಿದೆನ್ನುತೆ
ನಿನ್ನ ಈ ಚರ್ಯೆಗಳಿವೆಲ್ಲದರಿಂದ ಚೇತನ ತಪ್ತವಾಗುತಿದೆ.

೩೯

## ರುಷ್ಟಕಮನೀಯೆ

ಸೀರೆಯಂಚಿನೊಳಡಿಯನಾದರದಿಂದ ಮುಚ್ಚುವ
ಳೆರಗಿದಪೆನೆಂದೂಹಿಸಿ
ನಗೆಯ ಮೊಳೆ ಮಿನುಗುವುದನಡಗಿಪಳಿರದೆ ನೆವದೊಳು
ನೋಡಳೆನ್ನನು ದಿಟ್ಟಿಸಿ
ನಾನು ನುಡಿಸಿದೊಡಾಳಿ ಜನರೊಡನಾಡುತಿಹಳು
ವಿರೋಧ ವಚನವನಸಿಯಳು
ಇವಳ ಗಾಢಪ್ರಣಯವಂತಿರಲಿಂಥ ಮುನಿಸೂ
ನೋಡಲತಿ ರಮಣೀಯವು.

೪೦

## ಮುಗ್ಧೆ

ಸುಳ್ಳುಮಾತಿನ ಸಖಿಯರಿಂದವಳೆಷ್ಟು ಪದಗಳ
ಪಾಠವನು ತಾ ಕಲಿತಳು
ಅಷ್ಟುಪದಗಳ ಬೇಗನಾಡುತೆ ತಪ್ಪು ಮಾಡಿದ
ನಲ್ಲ ಬರಲವನೆದುರೊಳು
ಮುಂದೆ ಮನಸಿಜನಿಚ್ಛೆ ತಾನೆಂತಂತು ನಡೆಯಲು
ಮತ್ತೆ ತಾ ತೊಡಗಿದ್ದಳು
ಮುಗ್ಧತೆಯ ತೊಡವಾಂತ ಪ್ರೇಮಕೆ ಸಹಜ ಕೋಪವು
ಬೇರೆ ಸೊಬಗನು ಕೊಡುವುದು.

## ೪೧

## ಈರ್ಷ್ಯಮಾನಿನಿ

ತನ್ನ ಉಗುರಿನ ಕಲೆಯ ಸುರೆಯುವುಲಿನೊಳು ನೋಡುತೆ ಕರುಬುತರಿಯದೆಯೆ
ಬಾಲೆ ತೆರಳಿದೊಡೆಲ್ಲಿಗೈದುವೆ ಎಂದು ಸೆರಗನು ಹಿಡಿದು ನಾನೆಳೆಯೆ
ಕಣ್ಣ ನೀರನು ನೆಗಹಿ ಮೊಗದಿರುಹುತ್ತ ಬಿಡು ಬಿಡು ನನ್ನನೆಂದವಳು
ಕೋಪವೊಳು ಕೆಳತುಟಿಯ ನಡುಗಿಸುತೆಂದುದನು ಮತ್ತಾರು ಮರೆಯುವರು.

## ೪೨

## ಪ್ರಣಯಕುಪಿತೆ

ಹುಬ್ಬು ಬಿಗಿವುದೆ ಎಲ್ಲಿ ಕೋಪವೊ ಮೌನವಿರುವುದೆ ಎಲ್ಲಿ ಶಿಕ್ಷೆಯೊ
ಎಲ್ಲಿ ಮೇಣೆನ್ನೊಬ್ಬರೊಬ್ಬರ ನಗುವುದನುನಯ ನೋಡುವುದೆ ದಯವೊ
ನಮ್ಮ ಆ ತೆರನಾದ ಒಲವಿದು ನೋಡು ಈ ದಿನವೆಂಥ ಹಗೆಯಾಗಿರುವುದು
ಕಾಲಬಳಿಯಲಿ ನೀನು ಹೊರಳುವೆ ಕೋಪವಾದರೊ ಹೊಲ್ಲಳೆನ್ನನು
ತೊರೆಯದು.

೪೩

## ಪ್ರಣಯಾರ್ಥಿ

ಮೌನವನು ಬಿಡು ಸುತನು ! ನೋಡಿದೊ ಕಾಲಿಗೆರಗಿರುವೆನ್ನನು
ನೀನು ತಳೆದಿರಲಿಲ್ಲವಲ್ಲವೆ ಹಿಂದೆ ಇಂತಹ ಸಿಟ್ಟನು
ಎಂದು ನಲ್ಲನು ಹೇಳಲರೆಗಣ್ಣಾಗಿ ಆ ಕಡೆ ನೋಡದೆ
ಕಣ್ಣ ನೀರನು ಬಹಳ ಸುರಿದಳು ಮಾತನೊಂದನು ಆಡದೆ.

೪೪

## ಕೋಮಲೆ

"ಕಾಲಿಗೆರಗಲು ಬಹಳ ಹೊತ್ತಿಂತೇಕೆ ಮುಗ್ಧೆಯೆ
ನಿನ್ನ ತನು ಬಾಗಿರುವುದು
ತಪ್ಪು ತಗ್ಗಿರಲಿನಿಯನೊಳು ಮತ್ತೇಕೆ ನೀನಪ
ರಾಧವನೆ ಚಿಂತಿಸುವುದು"
ಹೀಗೆ ಪರಿಜನ ಕಥನದೊಳು ಕೋಮಲೆಯ ಕೋಪಾ
ವೇಗ ಶಾಂತಿಯೊಳದ್ದುದು
ಕಣ್ಣ ನೀರಿನ ಹೊನಲು ತುಂಬಿದುದುದುರಲಾರದು
ನಿಲ್ಲಲೂ ತಾನಾರದು.

೪೫

## ಧೀರಾಧೀರೆ

“ಏಕೆ ಕಡು ಸೊರಗಿರುವುದಂಗವಿದೇಕೆ ಸಿರ್ನೆರ
ವಿಂತು ನಡುಗುತಲಿರುವುದು
ಮುಗ್ಧೆ ಆನನವಿಂತು ಪಾಂಡು ಕಪೋಲ ತಾಸಾ
ರಿಂದಲಾದುದು ನುಡಿವುದು”
ಎಂದು ಜೀವಿತನಾಥ ಕೇಳಲು ಒಡನೆ ಸಹಜವಿ
ದೆಲ್ಲವೆನ್ನೊಳು ಎನ್ನುತೆ
ರೆಪ್ಪೆಯೊಳದಡಗಿದ್ದ ನೀರನು ತಿರುಗಿ ಆ ಕಡೆ
ಸುರಿಸಿದಳು ಬಿಸುಸುಯ್ಯುತೆ.



೪೬

## ನಿರಾಭರಣೆ

ಬಹಳ ಚಿಂತೆಯ ಮೋಹಭಾರದೊ
ಳಿಂತು ಚಲಿಸದೆ ಸಹಜ ಶೋಭೆಯು
ಬಳುಕಿ ನಿಲುವೀ ತೊಡವು ಮಾತ್ರದೊ
ಳಿಂದು ನೀನಿರೆ ನೋಡಿದೊಡನೆಯೆ
ನಿನ್ನ ಈತನು ಚಕಿತಗೊಳಿಪುದು ಸುಂದರಿ !

೪೭

## ಮಾನವಿಹ್ವಲೆ

ಇಂತು ನಲ್ಲನು ಕೇಳುತಿರಲಾ ಮಾನವಿಹ್ವಲೆ
ಎಂತೊ ಕಂಬನಿ ತಡೆದು ಗದ್ಗದ ದನಿಯೊಳು
ಇಲ್ಲವೇನೂ ಎಂದು ವಧು ತಾನೇನನೊರೆದಳೊ
ಅನಿತರಿಂದಲೆ ಅವನಿಗವಳಿಂದಾವುದಾದುದವರ್ಣ್ಯವು !

೪೮

## ವಂಚಿತೆ

ತಪ್ಪಿತಸ್ಥನು ನಲ್ಲ ನಿಂದಿತನಿರದೆ ಕೆಳದಿಯ
ಸೋಗಿನಿಂದೈತಂದು ನಿಂದಂದು
ಭ್ರಾಂತಿಯಿಂದೊಡನಪ್ಪಿಕೊಂಡೆನಿನ್ನಿಯನನು ನಾ
ಕೂಡುವಾಸೆಯು ಗುಟ್ಟನೊರೆದಂದು
'ಮುಗುದೆ ದುಷ್ಕರವಾದುದಿದು' ಎಂದವನು ಮಿತಿಮೀ
ರಿರುವ ಹಾಸದೊಳೆನ್ನ ಬರಸೆಳೆದು
ಅಪ್ಪಿಪುದರಿಂದಿಂತು ಕಿತವನು ನಾನು ವಂಚಿತ
ಳಾದೆನವನಿಂದಿಂದು ಸಂಜೆಯೊಳು.

೪೯

## ಸಚಕಿತೆ

ಎದೆಯ ಸೀಳಲಿ ತನ್ನ ಮನ ಬಂದವೊಲು ಮದನನು ಪ್ರಿಯ ಕುಂದಿಸಲಿ
ಚಪಲ ಪ್ರೇಮದ ನಲ್ಲನೊಳು ನನಗೆಸಕವಿಲ್ಲವು ಕೇಳು ಓ ಆಲಿ !
ಹರಿಣ ಲೋಚನೆ ತನ್ನ ಮಾನಾವೇಶದುಬ್ಬಿನ ಬಿರುಸೊಳಿಂತೊರೆದು
ಹೋದ ರಮಣನ ಹಾದಿಯನೆ ತಾ ಬಿಡದೆ ನಿಟ್ಟಿಸುತಿರ್ದಳರದಂದು.

೫೦

## ಖಂಡಿತೆ

ಶಠನೆ ಪರಿಭವದಿಂದ ಮೊಗದಿರುಹುತ್ತ ದುಃಖಿಸು
ವೆನ್ನನರಿಯದೆ ಅಪ್ಪಲು
ಬಂದುದೇನ್ನೈ ನನ್ನ ಸೌಭಾಗ್ಯವನು ನೀನಿಂ
ದಿಂಥದೆಸೆಗಿದನೊಡ್ಡಲು
ನೋಡು ದಯಿತೆಯ ಮೊಲೆಯ ಸೋಂಕಿನ ಅಂಗರಾಗಮೊ
ಳರುಣಗೊಂಡಿಹ ನಿನ್ನೆದೆ
ಎಣ್ಣೆಗೆಸರಿನ ಕೊಳೆಯು ಬಣ್ಣದೊಳೆನ್ನ ವೇಣಿಯ
ದೊಂದು ಗುರುತನ್ನಾಂತಿದೆ !

## ೫೧

## ಸಂಜ್ವರವತಿ

ತಸುವ ತನುಗೈದಿಹನು ವಾಮನು ವಿರಹ ವಿಷಮನು ಕಾಮನು
ದಿವಸಗಣನಾ ದಕ್ಷನಾದನು ದಯವಿಹೀನನು ಕಾಲನು
ನೀನೊ ಮಾನವ್ಯಾಧಿಗೊಳಗಾಗಿರುವೆ ನಾಥನೆ ಯೋಚಿಸು
ಚಿಸುರವೊಲು ಮೃದುವಾದ ಪ್ರಮದಾ ಜನರು ಪೇಳೆಂತುಳಿವುದು.

## ೫೨

## ಹತಾಶೆ

ಮೊದಲು ಬೇರ್ಪಡದೊಂದೆ ಮೈ ನಮಗೆಂಬ ರೀತಿಯ
ಲಂತು ನಾವಿರುತಿದ್ದೆವು
ಬಳಿಕ ನೀನೋ ಪ್ರಿಯನು ನಾನು ಹತಾಶೆ ಪ್ರಿಯತಮೆ
ಯಾಗಿ ನಾವಿರುತಿದ್ದೆವು
ಈಗ ನಾಥನು ನೀನು ನಾನೋ ಮಡದಿ ಮುಂದಿದ
ರಾಚೆಗಿನ್ನೇನೆಂಬೆನು !
ಪಡೆದೆ ನಾನಿಂದಿಂತು ನೋಡೀ ಕುಲಿಶ ಕರ್ಕಶ
ವಾದ ಪ್ರಾಣದ ಫಲವನು !

೫೩

## ಮಾನಧಾರಿಣಿ

"ಬಾಲೆ!" "ನಾಥನೆ!" "ಕೋಪವನು ಮಾನಿನಿಯೆ! ಬಿಡು" "ನಾ
ರೋಷದಿಂದೇಗೈದುದು ?"
"ಖೇದವೆಸಗಿದೆ ನಮಗೆ" "ನಿನ್ನಿಂದಿಲ್ಲ ತಪ್ಪಿನ
ಗೆಲ್ಲ ತಪ್ಪು ನನ್ನದು"
"ಆದರೇತಕೆ ಮತ್ತೆ ಗದ್ಗದ ದನಿಯೊಳಳುತಿಹೆ ?"
"ಆರ ಮುಂದಿಂದತ್ತುದು ?"
"ಅಲ್ಲವೇನೆನ್ನಿದಿರು" "ನಿನಗಾನಾರು" "ಕಾದಲೆ"
"ಅಲ್ಲವೆಂದೇ ಅತ್ತುದು"

೫೪

## ಕುಪಿತೆ

ಮುಳಿದ ದಯಿತೆ ತೊನೆವ ಬಳ್ಳಿದೋಳ ಪಾಶ
ದಿಂದಲೆಳೆದು ಬಿಗಿದು ಕಟ್ಟುತೆ
ಸಂಜೆಹೊತ್ತು ಸಖಿಯರೆದುರು ಕಾಂತನನ್ನು
ಮನೆಯೊಳಕ್ಕೆ ಎಳೆಯುತೊಯ್ಯುತೆ
ಮತ್ತೆ ಇಂತೆ ಎಂದು ಜಾರುತಿರುವ ಮೆಲುನು
ಡಿಯೊಳು ತೋರೆ ದುಶ್ಚರಿತೆಯನು
ಅಳುತ ನಲ್ಲೆ ಹೊಡೆದೊಡಿಲ್ಲವೆಂದು ನಗುತ
ಮಾಜುವಿನಿಯನವನೆ ಧನ್ಯನು!

೫೫

## ಪ್ರಣಯವಂಚಿತೆ

ಹಣೆಯೊಳಲತಿಗೆ ಗುರುತು ಮೆರೆವುದು ಗಳದೊ
ಳಂಗದ ಮುದ್ರೆ ತೋರುವುದು
ಬಾಯಿ ಕಾಡಿಗೆಗಪ್ಪನಾಂತುದು ಕಣ್ಣು
ತಂಬಲುಗೆಂಪು ತಾಳಿಹುದು
ಕೋಪ ಬರಿಸುವ ಪ್ರಿಯನ ಮಂಡನವಿದನು
ನೀಡುಂ ನೋಡಿ ಬೆಳಗಿನೊಳು
ಹುಲ್ಲೆಗಣ್ಣವಳುಸಿರು ಬಿಟ್ಟಳು ಕಯ್ಯೊ
ಳಾಟಕೆ ಹಿಡಿದ ತಾವರೆ ಹೂವಿನೊಡಲಿನೊಳು.

೫೬

## ಭ್ರಮಿತೆ

ಅನ್ಯವನಿತೆಯ ತುಟಿಯ ಕಚ್ಚಿರುವಿನಿಯನನು ತಾ
ಕೈಯ ತಾವರೆಯಿಂದ ಹೊಡೆದೆಂದು
ಅದರ ಕೇಸರದಿಂದ ದೂಷಿತವಾದುದೀಕ್ಷಣ
ವೆಂದು ಆ ಕ್ಷಣ ಮುಚ್ಚಲಕ್ಷಿಯನು
ಭ್ರಾಂತಿಯಿಂದಾ ಮುಗ್ಧೆ ಕುಟ್ಮಲಿತಾನನೇಂದುವಿ
ನಿಂದೆ ಗಾಳಿಯನೂದುತಿರುವಂದು
ಧೂರ್ತನಾದುದರಿಂದಲಾತನು ನಮುನಗೈಯವೆ
ಅವಳ ನೀಡುಂ ಮುದ್ದಿಸಿದನಂದು.

೫೭

## ಪ್ರೌಢೆ

ದಿನವು ಬೆಳಗಿನ ನಸುಕೊಳ್ಳೈತರಲೆನ್ನ ಕಂಗಳು ನಿದ್ದೆಗೆಟ್ಟಹವು.
ಮಂದಳಾದೆನ್ನೊಂದು ಗೌರವವಿಳಿದು ಹೋಯಿತು ಹಗುರಳಾಗಿಹೆನು.
ನೀ ನಿವಾರಿಸದಾದೆ ಇವುಗಳ ನಾನು ತೊರೆದೆನು ಸಾವಿನಂಜಿಕೆಯು.
ದುಃಖದಿಂದಿಹೆ ತೆರಳು ಮುಂದಕೆ ನಾನು ನೆಗಳಿದೆನೆಂದು ಕೇಳುವೆ
ಪಥ್ಯವಾದುದನು.

೫೮

## ಕ್ರೀಡಾಕುಪಿತೆ

ಎಂತೊ ಕೆಳದಿ ಆಟಕೆಂದು ಕೆರಳುತಂದು ತೆರಳು ಎಂದು ನುಡಿದೆನು
ಕಠಿನ ಹೃದಯ ಹಾಸನುಳಿದು ಝುಗ್ಗನೆದ್ದು ಹೋದನೆನ್ನ ನಲ್ಲನು
ಭರದೊಳಿಂತು ಒಲವ ಮುರಿದ ಕರುಣಹೀನನವನ ಮರಳಿ ನೆನೆಯುತೆ
ನಾಣನುಳಿದ ನನ್ನ ಮನವಿದಾಶಿಸುವುದು ಪೆರತನೇನಗೈವೆನು.

೫೯

## ಈರ್ಷ್ಯಮಾನಿನಿ

ನೀನೆ ಒಲವನವಳಿಗೆರೆದೆ ನೀನೆ ನುಡಿದು ಲಲ್ಲೆಗೈದು ನಲಿಸಿದೆ
ದೈವವಶದೊಳಿಂದು ನೀನೆ ಹೊಸತು ವಿಪ್ರಿಯವನು ಇವಳೊಳೆಸಗಿದೆ
ಇವಳ ಕೋಪ ತಾಳಲರಿದು ಸಂತವಣೆಯ ನುಡಿಗಳಿಂದಲಳಿಯದು
ಓವೊ ಕರುಣೆಯಿಲ್ಲದವನೆ ಇಂತು ಅವನ ಮನಸು ಕರಗುವಂದದೆ
ಕೆಳದಿ ಅಳಲಿ ಘಟ್ಟಿಯಾಗಿ ಬಾಯಿಬಿಟ್ಟು ಅವನು ಕೇಳುವಂದದೆ.

೬೦

## ವಿಷಣ್ಣಾನಾಯಿಕೆ

ಇಂದು ಮೊದಲಿಂದಿನಿಯನೊಳು ನಾ ಮರಳಿ ಮುನಿಸನು
ಮರೆದು ತೋರಿದೆನಾದರೆ
ಅಲ್ಲದಿರಲೀ ಒರಟುಮನದೊಳಗನ್ಯರೀತಿಯೊ
ಳಿನಿತಾನಾದರು ನೆನೆದರೆ
ಇನಿಯನಿಲ್ಲದ ತುಂಬುತಿಂಗಳ ಹೊಳೆವ ಬೆಳುದಿಂಗಳಿನ ಇರುಳುಗ
ಳನ್ನೆ ನೂಕುವುದಾಗಲಿ
ಅಲ್ಲದಿರಲಾ ವರ್ಷಋತುವಿನ ಮೋಡಗಪ್ಪಿನೊಳಿರುವ ಹಗಲನು
ಕಳೆವುದೆನ್ನಿಂದಾಗಲಿ.

೬೧

# ಕೃತಾಪರಾಧಿ

ಅಸಿಯುಳಿದುರೊಳು ತಪ್ಪು ಹೆಸರನು ಹೇಳಿ ಹೆದರಿದೆ ದೈವಹತಕನು ಎನಿಸಿದೆ.
ತಲೆಯು ತಗ್ಗಿಸಿ ಬೇರೆ ಮನದಿಂದೇನನೋ ನೆಲದಲ್ಲಿ ಬರೆಯಲು ತೊಡಗಿದೆ.
ಹೇಗೆಹೇಗೋ ಗೀರುಗೆರೆಗೆರೆ ಕೊನೆಗೆ ಆಕಾರದೊಳು ಅವಳನೆ ತಿದ್ದಿತು.
ಆರ ಹೆಸರನು ಉಚ್ಚರಿಸಿದೆನೊ ಅದುವೆ ತರುಣಿಯ ರೂಹು ನೆಲದೊಳು ಎದ್ದಿತು.

೬೨

# ರುಷ್ಟೆ

ಬಳಿಕ ತಿಳಿದು ಹೊಳೆದು ಮೆರೆಯುವರುಣಕಾಂತಿ
ಯಾ ಕಪೋಲದಾ ಮನಸ್ವಿನಿ
ರೂಢವಾದ ಪ್ರಣಯದೊಂದು ಅಣಕದಿಂದ ಗಡಸು
ಗೊಂಡ ತನ್ನದೊಂದು ದನಿಯೊಳು
"ಓಹೊ ಚಿತ್ರವಿದು ವಿಚಿತ್ರ" ವೆಂದು ಅಶ್ರುಕಲುಷ
ರೋಷದಿಂದಲಂದು ಇನಿಯಳು
ಬ್ರಹ್ಮಾಸ್ತ್ರವೆಸೆಯುವಂತೆ ನನ್ನ ತಲೆಯ
ಮೇಲೆ ವಾಮಚರಣವಿಟ್ಟಳು.

## ೬೩

## ಆತ್ಮವಂಚಕಿ

ಇಲ್ಲಿ ಮನೆಮನೆಯಲ್ಲಿ ಯುವತಿಯರಿಹರು ನಿನ್ನವೊ
ಲವರ ಬಳಿ ನೀ ಹೋಗಿ ಕೇಳಿಂದು
ಅವರ ನಲ್ಲರು ದಾಸನಂತಹ ನಿನ್ನ ನಲ್ಲನ
ತೆರದೊಳವರಿಗೆ ಮಣಿವರೇನೆಂದು
ಆತ್ಮವಂಚಕಿ! ಎಂದಿಗೂ ಕಿವಿಗೊಡುವುದಾಗದು
ನೀನು ಆ ದುರ್ಜನರ ನುಡಿಗೊಲಿದು
ಸ್ನೇಹರಸ ತಾನೊಮ್ಮೆ ಕಡಿದರೆ ಮತ್ತೆ ಪುರುಷರ
ಕೆಳೆಯ ಪಡೆವುದು ಕಠಿನವೆನಿಸುವುದು.

## ೬೪

## ಅಧೀರೆ

ನಾರಿಯರು ಮುಗ್ಧಶರ್ರಿನಿಯನನು ಸೆಳೆಯುವರು
ಮತ್ತೆ ನೀ ತಡೆದರೂ ಸುಮ್ಮನಿರರು
ಅದರಿನೇತಕೆ ಬಳಲಿ ಬರಿದೆ ನೀನಳುತಿರುವೆ
ಅವರೊಂದು ಬಯಕೆಯನು ಸಲ್ಲಿಸದಿರು
ಕಾತರೆಯೆ! ಹೇಳು ನೀನಾದೊರೆಯ ಸುಂದರನು
ಸಹೃದಯನು ಕೇಳಿರತನಾ ಯುವಕನು
ಬೆಟ್ಟತಹ ನಮ್ಮೊರಟು ನೂರಾರು ನುಡಿದಾಳಿ
ಯಿಂದೆಮಗೆ ಬೆಲೆಗಿಂದು ದೊರೆವನೇನು!

೬೫

## ನಿಪುಣೆ

ಬಹಳ ಹೊತ್ತಿಂದಿರವೆ ಗುಣಿಸಿಪೆನೆಂತು ಮುರಿವುದು ಹುಬ್ಬನೆಸುವುದನು
ಅಂತೆ ನೆನೆದಿಹೆನಿರವೆ ಬಿಂಕವೊಳೊಡನೆ ಕಣ್ಣನು ಮುಚ್ಚಿಕೊಳುವುದನು
ಮುಗುಳು ನಗೆಯನು ತಡೆವುದೆಂತೆನುವುದನು ಆದರದಿಂದ ಕಲಿತಿಹೆನು
ಸ್ಥಿರತೆಯಿಂದಿಹುದೆಂತು ಎನುವುದನೆನ್ನ ಚೇತನಕೆಂತೊ ಕಲಿಸಿಪೆನು
ಸಿದ್ಧವಾಗಿಹುದೆಲ್ಲಪರಿಕರವಿಂತು ಕೈಗೊಳಲಾನು ಮಾನವನು
ಸಿದ್ಧಿ ತಾನವಲಂಬಿಸಿರುವುದು ಮುಂದಕಿನ್ನಾ ದೈವದಿಚ್ಛೆಯನು.

೬೬

## ಬಾಲೆ

ಸಖಿಯರೊಂದುಪದೇಶ ದೊರೆಯದೆ ನಲ್ಲನೆಸಗಿದ ಮೊದಲ ತಪ್ಪಿನ ಸಮಯದೆ
ಬಿಂಕದಿಂದಲಿ ವೈಯ್ಯಯ ಬಳುಕಿಸಿ ಕೊಂಕು ನುಡಿಯೊಳು ತಿಳುಹುವುದ ನೀನರಿಯದೆ
ಹೊಳೆವ ಬೆಳ್ಳನೆ ಕೆನ್ನೆ ತಳದಿಂದಿಳಿದು ಜಾರುತೆ ಮಿಳಿರುವಲಕವ ತೋಯಿಸಿ
ಬಾಲೆ ಕೆಮ್ಮನೆ ಅಳುವೆ ನೈದಿಲೆಗಣ್ಣ ತುಂಬುತಲಿಳಿವಕಂಬನಿ ಸುರಿಯಿಸಿ.

೬೭

## ವ್ಯಥಿತೆ

ಬೆರಳ ತುದಿಯುಗುರಿನಲಿ ಕಂಬನಿಯ ಮಿಡಿಮಿಡಿದು
ಮುನಿದವಳೆ ಕೆಮ್ಮನಿಂತೇತಕಳುವೆ ?
ಕೊಂಡೆಯದ ನುಡಿಗಳಿಂದೀ ಮುನಿಸು ಹೆಚ್ಚಿದರೆ
ನಿರ್ವಿಣ್ಣನಾಗುವನು ನಿನ್ನಿನಿಯನು ;
ಅಲ್ಲದಿರಲನುನಯಕುದಾಸೀನನಾಗುವನು
ಬಿಕ್ಕಳಿಸಿ ನೀ ಅಳುವೆ ಅಂದು ಮತ್ತೆ.

೬೮

## ಚಪಲಹೃದಯೆ

ಹಾಗೆ ಮನೆಗೈತಂದು ಕಾಲಿಗೆ ಬಿದ್ದು ಒಲವೊಳು ಕರಗಿದಿನಿಯನನು
ಚಪಲ ಹೃದಯಳೆ ! ಏಕೆ ಸ್ವಾತಂತ್ರ್ಯವನು ವಹಿಸುತುಪೇಕ್ಷೆಗೈದಿಹುದು !
ಅಂತೆ, ಯಾವಜ್ಜೀವವೂ ನೀ ಸುಖ ಶುಭೋದಯ ಹೀನಳೆಂದೆನಿಸಿ,
ಬಾಳು, ಅಳು ದಿಕ್ಕಾಗಿ ಕೇಡಿಂದೊಗೆದ ಕೋಪದ ಫಲವನನುಭವಿಸಿ.

## ೬೯

## ಅಭಿಸಂಧಿತೆ

ಕಾಲಿಗಂದಿರದೆರಗುವುದನವಳಲ್ಲಗಳೆದುದರಿಂದಲನುನಯ ವಿಮುಖನು
ಗುಟ್ಟನಿಂದಲೆ ಮೋಸಗೈಯುವ ನಡತೆಯವನೆನೆ ಸಿಟ್ಟುಗೊಂಡತಿ ಬೆಟ್ಟನು
ತೆರಳಲಿನಿಯನು ದೊಡ್ಡ ನಿಟ್ಟುಸಿರೆಳೆದು ಮೊಲೆಗಳ ಮೇಲೆ ಕೈಗಳನಿಟ್ಟಳು
ಕಣ್ಣ ನೀರಿನೊಳೊದ್ದೆಯಾಗಿಹ ನೋಟವನು ತಾ ತನ್ನ ಸಖಿಯರೊಳಿಟ್ಟಳು.

## ೭೦

## ಮಾನದುಃಖಿತೆ

ಮೊಗವ ದಹಿಸುತಲಿಹುದು ನಿಟ್ಟುಸಿರಿರದೆ ಬೇರ್ವೆರ
ಸೆದೆಯು ಬಿರಿಯುತಲಿರುವುದು.
ನಿದ್ದೆ ಬಾರದು ಪ್ರಿಯನ ಮುಖ ಕಾಣಿಸದು ಕಂಬನಿ
ಹಗಲು ಇರುಳೂ ಸುರಿವುದು.
ದೇಹ ಒಣಗುತಲಿಹುದು ಪಾದಾನತನ ದಯಿತನ
ಸಂತುಪೇಕ್ಷಿಸಲಾದುದು.
ಹೇಳಿ ಸಖಿಯರೆ ! ಆವ ಲಾಭಕೆ ಮಾನವನು ತೋ
ರಿನಿಯನೊಳು ನೀನೆಂದುದು.

೭೧

## ನಿರನುರೋಧೆ

ನಿನ್ನ ಕೆನ್ನೆಯ ಪತ್ರರಚನೆಯನೊತ್ತಿ, ಕರತಲವಳಿಸಿದೆ !
ಅಮೃತ ಮಧುರದ ಅಧರ ರಸವನು, ಮತ್ತೆ ನಿಟ್ಟುಸಿರಿಂಟಿದೆ !
ಕೊರಳ ಸೆರೆ ಬಿಗಿಹಿಡಿದ ಗದ್ಗದ, ನಡುಗಿಸುತ್ತಿಹುದೆದೆಯನು !
ನಿರನುರೋಧೆಯೆ ! ಅಲ್ತು ನಾನಾ ಮನ್ಯು ನಿನಗಿಂದಿನಿಯನು !

೭೨

## ಹತಜೀವಿತೆ

ತಿಳಿಯಿತಾಗಲಿ ಮತ್ತೆ ವ್ಯರ್ಥಾಲಾಪವೇತಕೆ ತೆರಳಬಹುದೈ ನಲ್ಲನೆ !
ನಿನ್ನೊಳೊಂದಿನಿಸಾದರೂ ತಪ್ಪಿಲ್ಲ ನಮ್ಮೀ ವಿಧಿಯೆ ತಾ ಪ್ರತಿಕೂಲವಾಗಿಹುದು.
ನಿನ್ನ ಆ ತೆರನಾದ ಪ್ರೇಮವೆ ಇಂದು ಪಡೆದಿರಲಿಂಥ ದೆಶೆಯಿದನು ;
ನಿಜದೆ ಚಂಚಲೆಯಾದ ಹತಜೀವಿತಳು ಅಳಿದರೆ ಪೀಡೆ ತಾನೇನು !

೭೩

## ಕಠಿನಹೃದಯೆ

ಕಠಿನ ಹೃದಯಳೆ ! ಕಟ್ಟು ಕಥೆಯಿಂದೊಗೆದ ಭ್ರಾಂತಿಯನುಳಿವುದು
ಪಿಶುನ ವಚನಗಳಿಂದಲೆನ್ನನು ತಗದು ಬೇಗುದಿಗೊಳಿಪುದು
ಹೇಳು ನಿಸ್ಸಂಕೋಚದಿಂದೆನಗಾವ ಶಿಕ್ಷೆಯ ನೀನು ನಿಶ್ಚಯಿಸಿರುವುದು
ಪ್ರಿಯಳೆ ! ನಿನಗಭಿರುಚಿತವಾವುದು ಅದನು ವಿಧಿಸುತ ನೀನು ಸುಖದಿಂದಿರುವುದು.

೭೪

## ಕಲಹಾಂತರಿತೆ

ಗುಣಿಸಿ ನೋಡದೆ ಪ್ರೇಮ ಫಲವನು ಸುಹೃದರೆನಿಪರ ನುಡಿಯ ಲೆಕ್ಕಿಸದೆ
ನೀನಕಾಲದೊಳಿಂತಿದೇತಕೆ ತರಳೆ ಕೋಪವ ತೋರಲಾಶಿಸಿದೆ
ನೀನೆ ನುತ್ತೀ ಪ್ರಳಯದಗ್ನಿ ಜ್ವಾಲೆಯಂತೆಸೆದುರಿವ ಕೆಂಡವನು
ನಿನ್ನ ಕೈಗಳಿನೆಳೆದುಕೊಂಡಿಹೆ ಸಾಕು ನಿಲ್ಲಿಸರಣ್ಯರುದಿತವನು.

೭೫

## ಕಠಿಣೆ

ಹೊರಗೆ ನಲ್ಲನು ತಲೆಯ ತಗ್ಗಿಸಿ ನೆಲವ ಕೆರೆಯುತಲಿರುವನು
ಸಖಿಯರುಣಿಸನು ತೊರೆದು ಅತ್ತತ್ತವರ ಕಣ್ಣುಗಳೂದಿವೆ
ಪಂಜರದಲಿಹ ಗಿಣಿಗಳೆಲ್ಲವು ನಕ್ಕು ನುಡಿವುದನುಳಿದಿವೆ
ನಿನ್ನ ಗತಿಯೋ ಇಂತು, ಬಿಡು ನೀನಿಂದು ಕಠಿನಳೆ ಮುನಿಸನು.

೭೬

## ಪ್ರೇಮಜೀವನೆ

ಮಾನ ಮಲಿನತೆ ಹೊಂದಿದಂದವಳಾನನೇಂದುವ
    ಬೊಗಸೆಗೈಗಳಿನಾಂತಳು.
ನಾನು ಕ್ಷೀಣೋಪಾಯನಾದಂದೆರಗಿ ಮಣಿವುದ
    ದೊಂದೆ ಶರಣೆನುತಿದ್ದೆನು.
ತಡೆವ ಎವೆದುದಿಯಿಂದ ಜಾರುತೆ ಸಿಡಿದು ಕುಚತಟ
    ದಿಂದಲೊಡೆಯುತಲಿಳಿಯುತೆ
ಒಡನೆ ಸುರಿಯುವ ಕಣ್ಣ ಹನಿಯಿಂದೆನಗನುಗ್ರಹ
    ವಂದು ಸೂಚಿತವಾದುದು.

೭೭

## ಸ್ವೀಯೆ

ನನ್ನೊಳಿವಳೇಗೈವಳೆನುವುದನಿಂದು ನೋಡುವೆನೆಂದು
ನಾನತಿ ಸ್ಥೈರ್ಯದಿಂದಿರುತಿದ್ದೆನು
ನನ್ನ ನೇತಕೆ ನುಡಿಸನೀತನು ಶಠನೊ ಏನೋ ಎಂದು
ತಾನತಿ ಸಿಟ್ಟಿನಿಂದಿರುತಿದ್ದಳು
ಒರುವರೊರುವರನಿಂತು ನಾಚಿಕೆವೆರೆದ ನೋಟದೊ
ಳೀಕ್ಷಿಸುತ್ತಿರುವೊಂದವಸ್ಥಾಂತರದೊಳು
ನಾನು ನೆವವನ್ನಿಟ್ಟು ನಕ್ಕೆನು ಅವಳು ಬಗೆಯನು
ಕದಡುವಂದದೊಳತ್ತು ಕಣ್ಣೀರಿಟ್ಟಳು.

೭೮

## ವ್ರೀಡಾಕುಲಿತೆ

ನಂಬಿ ಸಖಿಯರ ನಡೆವುದಿರಲಾ ನನ್ನ ಮನದಾಶಯದ
ಸಾರವನರಿಯುವಿನಿಯನೊಳು
ಭಾವಗರ್ಭಿತ ದೃಷ್ಟಿಯರ್ಪಣಗೈಯಲಿಂದಸಮರ್ಥ
ಳಾದೆನು ವ್ರೀಡೆಯಿಂದಾನು
ಪರರ ಪರಿಹಾಸದೊಳು ಚತುರರು ಅತುಲ ಸೂಕ್ಷ್ಮೇಂಗಿತರು
ಲೋಗರು ಸುತ್ತಣೇ ಜನರು.
ತಾಯೆ ! ಆರನು ಶರಣುಹೋಗಲಿ ಹೃದಯದೊಳಗೆಯೆ ಒಲವಿ
ನುರಿಯಿರದುಡುಗುತಿಹುದಿಂದು.

೭೯

## ಪುಷ್ಪವತಿ

ಪುಷ್ಪವತಿಯಾದಂದು ಕೇಳೀ ಶಯನವನು ತೊರೆ
ದುಳಿದ ತೆಳ್ಳನೆಯವಳನು
ತುಟಿಯ ನಡುಗಿಸಿ ಹುಬ್ಬುಹಾರಿಸಿ ಸನ್ನೆಗೈಯುತ
ಲಿನಿಯನೆರೆಯಲು ಮುತ್ತನು
ಮುಗುಳು ನಗೆಯೊಳು ಹೊಳೆವ ಕೆನ್ನೆಯ ತನ್ನ ಮೊಗವನು
ಸೆರಗಿನಂಚೊಳು ಮುಚ್ಚುತೆ
ತಲೆಯನಲ್ಲಾಡಿಸಿದಳೊಯ್ಯನೆ ತೊನೆಯುವೋಲೆಯ
ತುಂಬು ಜೊಂಪೆಯ ತೂಗುತೆ.

೮೦

## ಲಜ್ಜಾವ್ಯಾಕುಲೆ

ಮೊಗವ ತಗ್ಗಿಪಳೊಗೆದ ವಿನಯದೊಳಿನಿಯ ಹಿಡಿಯಲು ಸೆರಗನು
ಹಟದೊಳಪ್ಪುಗೆಗೆಳಸಲಿವಳಿರದೆಳೆದುಕೊಳುವಳು ಕೈಯನು.
ಶಕ್ಯಳಲ್ಲೆಂದೆನಲು ನಗುಮೊಗದವರ ಸಖಿಯರ ನೋಡುತ
ಪ್ರಥಮ ಪರಿಹಾಸದೊಳು ನವವಧುವಿಹಳು ನಾಣೊಳು ಬಾಡುತ.

೮೧

## ಜ್ಯೇಷ್ಠೆ–ಕನಿಷ್ಠೆ

ಒಂದೆ ಹಾಸಿನೊಳಿನಿಯರಿಬ್ಬರು ಕುಳಿತುದನು ಕಾ
ಣುತ್ತ ಹಿಂಬದಿಯಿಂದಲೈತಂದು
ಒಲಿದು ಒಬ್ಬಳನಾಟವಾಡುವ ಸೋಗುನೆವದೊಳು
ಕಣ್ಣುಗಳ ತಾವುಚ್ಚುತೊಡನಂದು
ಕೊರಳ ನಸುಕೊಂಕಿಸುತ ಪೊಂಪುಳಿವೋದ ಧೂರ್ತನು
ಒಲುಮೆ ದಳವೇರಿರುವ ಬಗೆಯಿಂದ
ತಾನೆ ತನ್ನೊಳಗೊಳಗೆ ನಗುತಿರಲೆಸೆವ ಕೆನ್ನೆಯ
ಬೇರೆಯೊಬ್ಬಳನೆಳೆದು ಮುದ್ದಿಸಿದ.

೮೨

## ಸ್ತ್ರೀಯೆ

ಆವುದಿನಿನುಡಿಗಳಿಂದಾರದಿಹುದೊಲುಮೆ ಕೆಳೆವಾತಿನೊಳಗೊಳಸರಿಯದು
ಯತ್ನದಿಂದಾವುದೀ ನಿಡುಹಗಲೊಳತಿ ಕಷ್ಟದಿಂದಾಂತುದೆನಿಸಿದುದು
ಆ ಮಾನವೆಂತೆಂತೊ ತಿರುಗಿಸಿದ ಓರೋರ್ವರಾ ಮೊಗದೊಳೊಲಿದು
ಕುಡಿನೋಟವೆರೆದು ನಗುಬಿರಿದೊಡನೆ ಇಬ್ಬರನು ತೊರೆದುದಂದು.

೮೩

## ಮಧ್ಯೆ

ಒಂದೆ ಹಾಸೊಳು ಒಬ್ಬರೊಬ್ಬರ ಮನದೊಳೊಲಿದರು
ಆತ್ಮಗೌರವವುಳಿವ ಸಲುವಾಗಿ
ಗಂಡ ಹೆಂಡಿರು ಮಾತನಾಡದೆ ಮೊಗವ ತಿರುಗಿಸಿ
ಕೆಮ್ಮನಿರುತಿರಲಂದು ಕಡುಸೊರಗಿ
ಮೆಲ್ಲ ಮೆಲ್ಲನೆ ಅವರ ಕಡೆಗಣ್ಣುಗಳ ಆ ಕುಡಿ
ನೋಟ ಚಲಿಯಿಸಿ ಕಂಗಳೊಡವೆರೆಯೆ
ಭಗ್ನವಾದನು ಮಾನಕಲಿ ತಾನೊಡನೆ ಕಿಲ ಕಿಲ
ನಕ್ಕು ಕೊರಳಪ್ಪುಗೆಯೊಳವರೆಸೆಯೆ.

೮೪

## ಉತ್ಸುಕೆ

ಒಂದೆ ಹಾಸಿನೊಳಿದ್ದ ಪದದೊಳು ಮುಗ್ಧೆ
ಕೇಳಿ ವಿಪಕ್ಷರಮಣಿಯು ಹೆಸರನು
ಒಡನೆ ಕೋಪದೊಳಿರದೆ ಮೊಗದಿರುಹುತ್ತ
ಬೇಗುದಿಗೊಂಡು ಚಾಟೂಕ್ತಿಗಳನಾಡಿದರು
ನಲ್ಲನನು ಆವೇಗದಿಂದಪಚಾರ
ಗೊಳಿಸಲು ಕೆಮ್ಮನಾಗಲು ಆತನು
ನಿದ್ದೆಹೋದನೊ ಏನೊ ಎಂದಿರದೊಡನೆ
ಸರ್‍ರನೆ ಕೊರಳ ತಿರುಗಿಸುತವಳು ನೋಡಿದಳು.

೭೫

## ಮುಗ್ಧನಯನೆ

‘ಮತ್ತಿದೇತಕಿಂತು ಮುಗ್ಧನಯನೆ ಡಾಬಿನಿಂದ
ಲೆಳೆದು ಕಟ್ಟ ಸೀರೆ ಸೆರಗನು
ಮಲಗಿರುವಳು’ ಎಂದು ಅವಳ ಪರಿಜನವನು ಸ್ವೇಚ್ಛೆ
ಯಾಗಿ ಕೇಳುತಿರಲು ನಲ್ಲನು
‘ತಾಯಿ ! ನನ್ನ ನಿದ್ರೆಯಿದನುಮಿವನು ಕೆಡಿಸುತಿರುವ
ನಿಂದು’ ಎಂದು ಕೋಪಗೊಂಡಳು
ತಿರುಗಿ ಮಗ್ಗುಲಾಗುವೊಂದು ನೆವದೊಳವಳು ಹಾಸು
ಗೆಯೊಳು ಅವನಿಗೆಡೆಯನಿತ್ತಳು.

೭೬

## ಉತ್ತಮ ನಾಯಿಕೆ

ನನ್ನ ನಲ್ಲನು ಬಂದು ಎದುರೊಳು ನಿಂದು ನಲ್ಮೆಯ ಸವಿಯ ನುಡಿಯೊರೆಯೆ
ನನ್ನ ಇಂದ್ರಿಯವೆಲ್ಲ ಕಣ್ಣಾಗುವುದೊ ಕಿವಿಯಾಗುವುದೊ ನಾನರಿಯೆ.

೮೭

## ಸ್ವಾಧೀನಪತಿಕೆ

'ರವಿಕೆಗಳೆದರೆ ನೀ ಮನೋಹರ ಶೋಭೆ ತಳೆಯುವೆ ವಾಮಲೋಚನೆಯೆ!'
ಎಂದು ಹೇಳುತ ಅವಳ ಪ್ರಿಯತಮ ರವಿಕೆದಾರವನಿರದೆ ತಾನೆಳೆಯೆ,
ಕುಳಿತು ಹಾಸೊಳು ನಗುವ ವಧುವಿನ ಕಣ್ಣಹಬ್ಬದೊಳುಬ್ಬಿದಾಳಿಯರು
ಮೆಲ್ಲ ಮೆಲ್ಲನೆ ಸುಳ್ಳುನೆಪವನು ನುಡಿಯುತೆಲ್ಲರುಮಿರದೆ ಜಾರಿದರು.

೮೮

## ಪ್ರೌಢೆ

ಗಂಡಹೆಂಡಿರು ರಾತ್ರೆ ಆಡಿದ ಮಾತನಾಲಿಸಿ ಮನೆಯ ಗಿಣಿ
ಬೆಳಗಿನೊಳು ಹಿರಿಯರ ಮುಂದೆ ಹೇಳಲು ದೊಡ್ಡದನಿಗೈದು
ನಾಚಿ ದಾಳಿಂಬೆಯನು ತಿನಿಸುವ ನೆವದೊಳಾ ವಧು ಕಿವಿಯ ಓಲೆಯ
ಕೆಂಪು ಹರಳನು ಕೊಕ್ಕಿನೊಳಗಿಟ್ಟದರ ಬಾಯನು ಮುಚ್ಚಿಸಿದಳಂದು.

೮೯

## ಆತ್ಮೋಪಾಲಂಭಕಿ

ಪ್ರಾಣನಾಥನ  ಕೊರಳ ಮೂಢಳದೇಕೆ ಬಿಗಿದೆಳೆದಪ್ಪಿಕೊಳದಾದೆ
ಏಕೆ ನೋಡದೆಹೋದೆ ಮುದ್ದಿಡುವೆಂದು ಮೊಗವನದೇಕೆ ತಗ್ಗಿಸಿದೆ
ಬೇಡವೆಂದೇಕೆಂದೆನೆಂದಾ ನವವಧೂಚೇಷ್ಟಿತವ ನೆನೆದವಳು
ತರುಣಿ ಪ್ರೇಮೋದಯದೆ ಪಶ್ಚಾತ್ತಾಪಪಡುವಳು ರಸವನರಿತವಳು

೯೦

## ಊಢಾ ನಾಯಿಕೆ

'ಬಳಿಗೆ ಬಾ ನಿನಗೊರೆವೆನೇಕಾಂತದೊಳದಾವುದೊ ಗುಟ್ಟನೊಂದನು' ಎಂದನು.
ಸರಸಹೃದಯಳು ಚಿತ್ತವಿಟ್ಟದನಾಲಿಸಲು ನಾ ಸನಿಹದೊಳು ಕುಳಿತಿದ್ದೆನು.
ಬಳಿಕ ಕಿವಿಯೊಳದೇನನೋ ಒರೆವೊಂದು ನೆವದೊಳು ಮೂಸಿ ನನ್ನೀ ಮೊಗವನು
ಹಿಡಿದು ಸಿಡು ಜಡೆಯೆಳೆದು ಕೆಳದಿಯೆ ನನ್ನ  ಈ ತುಟಿ ರಸವನೀಂಟಿದನಿನಿಯನು.

೯೧

## ಧೂರ್ತ

ಗಾಢಾಲಿಂಗನದಿಂದುದುರಿರುವೀ ಚಂದನ ಧೂಳಿಯ ರಾಶಿಯಲಿ
ಬೆಟ್ಟಿತು ಹಾಸುಗೆ ಓ ತನ್ವಂಗಿಯೆ! ನೋಡೆಂದಿನಿಯನು ಹೇಳುತಲಿ
ಬರಸೆಳೆದೆನ್ನನು ವಕ್ಷದೊಳಾನುತೆ ಮನವನು ಕೆರಳಿಸಿ ತುಟಿಕಚ್ಚಿ
ಉಟ್ಟಿರುವೆನ್ನಂಬರವನು ಸೆಳೆಯುತೆ ಅಡಿವೆರಳಿಕ್ಕುಳದಿಂದುರ್ಚಿ
ತಾತ್ಕಾಲೋಚಿತ ಕರ್ಮವ ನೆನೆಯುತೆ ಧೂರ್ತನು ನೆಗಳಿದನದನಂತೆ.

೯೨

## ಪ್ರಕೃತಿತರಳೆ

ನಿದ್ದೆಹೋದನಿವನು ಕೆಳದಿ ನಿದ್ದೆಗೈಯಲೆಂದು
ಸಖಿಯರಿಂತು ಹೋದನಂತರ
ಪ್ರೇಮಭರದೊಳೊಲುಮೆವೆರೆದು ತರಳೆ ನಾನು ಅವನ
ಮೊಗದೊಳೆನ್ನ ಮೊಗವನಿರಿಸಿದೆ.
ನವಿರುಗೊಂಡ ಧೂರ್ತನೆರೆಯ ಸುಳ್ಳು ಸುಳ್ಳೆ ಕಣ್ಣು
ಮುಚ್ಚಿಕೊಂಡಿರುವುದನರಿಯುತೆ
ನಾಚಿದೆನ್ನ ನಾಚಿಕೆಯನು ಕಳೆದನವನು ಮುಂದೆ
ಮಾಳ್ಪುದಾವುದದನು ಮಾಡುತೆ.

೯೩

## ಉತ್ಕಂಠೆ

ಶಯನಮಂದಿರ ಶೂನ್ಯವಾದುದನರಿದು ಮೆಲ್ಲನೆ ಹಾಸನಿರದುಳಿದೇಳುತೆ
ಸೋಗುನಿದ್ದೆಯೊಳಿದ್ದ ನಲ್ಲನ ಮುದ್ದು ಮೊಗವನು ಬಾಲೆ ನೀಡುಂ ನೋಡುತೆ
ಶಂಕೆಯಿಲ್ಲದೆ ಮುತ್ತನೊತ್ತಿರಲೊಗೆದ ಗಂಡಸ್ಥಲದ ಪುಲಕವ ಕಾಣುತೆ
ಬಾಲೆ ನಾಚುತೆ ಮೊಗವ ತಗ್ಗಿಸಲಿನಿಯ ನೀಡುಂ ಮುದ್ದಿಸಿದ ನಗುತೆ.

೯೪

## ಭೋಗನಿಮಗ್ನೆ

ಸೆಜ್ಜೆಗಿನಿಯನು ನಲಿದು ತಾನೈತಂದ ವೇಳೆಯೊಳೊಡನೆ
ತಾನಾಗಿರದೆ ನೀವಿಯು ಜಾರಿತು
ಅಳಕವಾದೀ ಮೇಖಲೆಯು ಎಳೆಗಂಟಕೊಂಡುದರಿಂದ
ಉಡುಗೆ ನಿತಂಬದೊಳಗಿನಿಸುಳಿಯಿತು
ಇಷ್ಟು ಮಾತ್ರವನಿಂದು ನಾನರಿತಿಹೆನು ಕೆಳದಿಯೆ ಬಳಿಕ
ಪ್ರಿಯತಮನಂಗ ಸಂಗಮವಾದುದು
ಮುಂದೆ ನಾನಾರಾತನಾರಾ ರತಿಯದಾವುದು ಅರಿಯ
ದೊಂದನು ಮರವಿನೊಳು ಕರಗಿದ್ದೆನು.

## ೯೫

## ಪರಕೀಯೆ

ಭರದಲಿ ಬಿಗಿದೆಳೆದಪ್ಪಿರಲಮುಕಿದ ಮೊಲೆಗಳಿ
ನೊಗೆದಿಹ ನವೀನ ಮೈಯವಳು
ಗಾಢಸ್ನೇಹದ ರಸವತಿರೇಕದೊಳುದುರಿದ
ಚೆಂದದ ಪೊರೆವಾರುಡೆಯವಳು
ಬಿಡು ಬಿಡು ಮಾನದ! ನನ್ನೊಳಲಂಪಿದು ಬೇಡವೊ
ಸಾಕೆಂವಗ್ಗಿದ ದನಿಯೊಳು ನುಡಿವವಳು
ನಿದ್ದೆಯೊಳಿದ್ದಳೊ ಸಾವೈದಿದಳೋ
ಮನದೊಳಗದ್ದಳೊ ಕರಗಿದಳೋ!

## ೯೬

## ಸುರತಾಂತ ಸತಿ

ಚಿಗುರುಗೈಯನು ಚಾಚಿ ಬಳಚುತಲರಸುತಿರುವಳು ತನ್ನ ಕಳೆದುಡೆಯ
ಹರಿದ ಹೂವಿನ ಮಾಲೆಯುಳಿಕೆಯನೆಸೆದು ಕೆಡಿಪಳು ದೀಪದೆಳೆಕುಡಿಯ
ಪತಿಯ ಕಣ್ಗಳಲಿರಿಸಿ ಕಣ್ಗಳ ಮರಳಿ ನೋಳ್ಪಳು ಸೂಸುತೆಳನಗೆಯ
ಸುರತ ವಿರತ ಸಮಾಕುಲಾಂಗನೆ ಮೆರವಳೀ ತೆರದೊಂದು ನವ ಪರಿಯ.

೯೭

## ವಿಪರೀತರತಿಕ್ರೀಡೋತ್ಕಂಠೆ

ನಾನೆ ಇಂದಾ ಪ್ರಮದೆಯಾಗಿಹೆನವುಗಳೇ ಈ ಬಳೆಗಳು
ಸಹಜಲಜ್ಜಾಧನರು ನಾರಿಯರೀ ಅವೃತ್ತಿಯು ನಮ್ಮದು
ಇಂಥ ಪುರುಷಾಯತದ ಈ ವಿಪರೀತವಾಗಿಹ ರತಿಯೊಳು
ನೆನಪು ಮರುಳಲು ಇಂತು ನಾಚುತೆ ನನ್ನ ವ್ಯೆಯನು ತಿಳಿದೆನು
ಮೊದಲು ಪುಂಭಾವವನು ತೊರೆದೆನು ಬಳಿಕ ತೊರೆದೆನು ಪತಿಯನು.

೯೮

## ಅದ್ವೈತ

ಮಹಡಿ ಮನೆಯೊಳಗವಳು ದಿಕ್ಕು ದಿಕ್ಕಿನೊಳವಳು.
ಹಿಂದವಳು ಮುಂದವಳು ಸುತ್ತ ಅವಳು
ಹಾಸುಮಂಚದೊಳವಳು ಹಾದಿಹಾದಿಯೊಳವಳು
ಎಲ್ಲೆಡೆಯೊಳೂ ಅವಳೆ ತೋರುತಿಹಳು.
ಅಕಟಕಟ ! ನನ್ನೀ ಮನೋವೃತ್ತಿ ಪೆರತಲ್ಲ.
ಬೇರೊಬ್ಬಳೂ ಅವಳೆ. ಅವಳನುಳಿದಿಲ್ಲ.
ಅವಳನಗಲಿರುವೆನಗೆ ಸರ್ವಜಗವೂ ಅವಳೆ.
ಅದ್ವೈತವಾದವಿದು ಏನೆಂಥದು !

೯೯

## ಫಲಶ್ರುತಿ

ಚಿಗುರುದುಟಿವನು ಕಡಿಯಲದುರುತ ಕೈಯ ತುದಿಯನು ಒದರುವ
ಶಠನೆ! ಬಿಡು ಬಿಡು ಬೇಡವೆನ್ನುತ ಮುನಿದು ಹುಬ್ಬನು ಕುಣಿಸುವ
ಮತ್ತ ಸೀತ್ಕಾರವನು ತೋರುವ ಕಣ್ಣ ಕೊನೆಯನು ಮೆರೆಯುವ
ಮಾನಿನಿಯ ಭರದಿಂದ ಮುದ್ದಿಡುವವರಿಗಮೃತವು ದೊರೆವುದು.
ಮೂಢರಮರರು ಬರಿದೆ ಕಡಲನು ಬಳಲಿ ಕಡೆದರು ನವೆದರು.

೧೦೦

## ಸ್ವಸ್ತಿವಾಚನ

ತೊನೆದಾಡುವ ಕಿವಿಯೋಲೆಯ ಮಿಳಿರುತಲಿಳಿ
ದಾಡುವ ಕುರುಳೋಳಿಯ ತಳೆದಿರುವ
ಕಡುಕಳಲಿದ ಬೆಮರಿನ ನೀರ್ಪನಿ ತುಂತುರೊ
ಳಿನಿಸಳಿಸಿದ ಹಣೆ ಬೊಟ್ಟನೊಳಿಸೆವ
ಸುಸಿಲಿನ ಮುಗಿತಾಯದೊಳಾದಾಯಸದೊಳು
ಜೋಲುವ ಕುಡಿನೋಟವನುರೆ ಮರೆವ
ಪುರುಷಾಯಿತ ಸಂಭೋಗದೊಳಿಂತೊಪ್ಪುವ
ಅಸಿಯಳ ಮೊಗವೆಮ್ಮನು ಚಿರಕಾಲ
ಸಲಹಲಿ ; ಹರಿಹರ ಷಣ್ಮುಖ ಮೊದಲಾಗಿಹ
ಸುರರಿಂದಿನ್ನಾಗುವುದೆಮಗೇನು !

---

## ಕನ್ನಡ ಕವಿ ಕಾವ್ಯಮಾಲೆ, ಶಾರದಾ ಮಂದಿರ

ರಾಮಯ್ಯರ್ ರಸ್ತೆ, ಮೈಸೂರು-೪

ವಿಶ್ವಭಾರತಿ ಶರಣು ಕಿರುತೀರ್ಥವಲ್ತು.
ತೇಜಸ್ವಿಯಾಗಲಿ ನಾವು ಓದುವ ಓದು
ವಿದ್ವೇಷವೆಮ್ಮೊಳಗೆ ಇಲ್ಲದಿರಲಿ.

### ಬೆಳ್ಳಿಶಾರದೆ

ಈ ಇಪ್ಪತ್ತೈದು ವರ್ಷಗಳಲ್ಲಿ ಮಾಲೆಯಲ್ಲಿ ಪ್ರಕಟವಾಗಿರುವ ಪುಸ್ತಕಗಳು ಇನ್ನೂರ ಇಪ್ಪತ್ತೈದಕ್ಕೂ ಮಿಕ್ಕಿವೆ. ಎಷ್ಟೋ ಗ್ರಂಥಗಳು ಹಲವು ಮುದ್ರಣಗಳನ್ನು ಕಂಡಿವೆ. ಬಹಳ ಕಾಲದಿಂದಲೂ ಸಂತತವಾಗಿ ನಡೆದು ಬಂದ ಪ್ರಕಾಶನ ಸಂಸ್ಥೆಗಳು ನಮ್ಮಲ್ಲಿ ಬಹಳವಿಲ್ಲ. ಇರುವ ಕೆಲವಲ್ಲಿ ಕವಿ ಕಾವ್ಯಮಾಲೆ ಒಂದು.

ಒಂದು ಸಲ ದಿವಂಗತ ತೀ. ನಂ. ಶ್ರೀಕಂಠಯ್ಯನವರು ಧಾರವಾಡದಿಂದ ಕವಿಕಾವ್ಯಮಾಲೆಯ ಸಂಪಾದಕರಿಗೆ ಕಾಗದ ಬರೆಯುವಾಗ 'ಶಾರದಾ ಮಂದಿರ' ಎಂದು ವಿಳಾಸ ಬರೆದಿದ್ದರಂತೆ. ಆ ಹೆಸರು ಶಂಕರನಾರಾಯಣ ರಾಯರಿಗೆ ಮೆಚ್ಚುಗೆಯಾಯಿತು. ಅಂದಿನಿಂದ ಕವಿಕಾವ್ಯಮಾಲೆಗೆ ಶಾರದಾ ಮಂದಿರ ನೆಲೆಯಾಯಿತು. . . .

ಕವಿಕಾವ್ಯಮಾಲೆಗೆ ಈಗ ಬೆಳ್ಳಿವರ್ಷ ನಡೆಯುತ್ತಿದೆ. ಕಾಲುಶತಮಾನದ ಈ ಪ್ರಕಟನ ಕಾಯಕದ ಯಶಸ್ಸು ಶಂಕರನಾರಾಯಣರಾಯರ ಸಾಹಸವೂ ಹೌದು; ಅದೃಷ್ಟವೂ ಹೌದು. . . .

ಪ್ರಕಾಶನ ವ್ಯವಹಾರವನ್ನು ಕೇವಲ ವ್ಯವಹಾರವಷ್ಟೇ ಎಂದು ಅವರು ಮುಗಿಸುವುದಿಲ್ಲ. ಅದಕ್ಕೊಂದು ಆತ್ಮೀಯ ಸ್ಪರ್ಶವಿರುತ್ತದೆ; ಕೌಶಲದ ಕವಚವಿರುತ್ತದೆ. ಶುದ್ಧವಾದ ಅಭಿರುಚಿ ನೇರವಾದ ವ್ಯವಹಾರಗಳಿಂದ ಅವರು ಒಬ್ಬರೇ ಒಂದು ಸಂಸ್ಥೆಯನ್ನು ಕಟ್ಟಿದ್ದಾರೆ.

ಆ ಸಂಸ್ಥೆ ಶಾರದಾಮಂದಿರ. ಆ ಮಂದಿರದ ಶಾರದೆಗೆ ಈಗ ಬೆಳ್ಳಿಯುತ್ಸವ. ಈ ಉತ್ಸವದ ನೆನಪಿಗೆಂದು ಇಪ್ಪತ್ತೈದು ಪುಸ್ತಕಗಳನ್ನೂ, ಒಂದು ಸಂಸ್ಮರಣ ಸಂಪುಟವನ್ನೂ ಪ್ರಕಟಿಸುವ ಯೋಜನೆ, ಆ ಯೋಜನೆಗೆ ಅನುಗುಣವಾಗಿ ಪುಸ್ತಕಗಳು ಪ್ರಕಟವಾಗಿವೆ; ಸ್ಮರಣ ಸಂಪುಟ ಅಚ್ಚಿನಲ್ಲಿದೆ. ಒಂದು ವರ್ಷದಲ್ಲಿ ಇಪ್ಪತ್ತೈದು ಗಟ್ಟಿ ಪುಸ್ತಕಗಳನ್ನು ಪ್ರಕಟಿಸುವ ಸಾಹಸ ನಮ್ಮಲ್ಲಿ ಅಪೂರ್ವವಾದದ್ದು.

—ಹಾ. ಮಾ. ನಾಯಕ